CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

ಸಂಪುಟ ೧೩೮ || ಬೆಂಗಳೂರು, ಗುರುವಾರ, ಡಿಸೆಂಬರ್ ೧೮, ೨೦೦೩ (ಮಾರ್ಗಶಿರ ೨೭, ಶಕ ವರ್ಷ ೧೯೨೫) || ಸಂಚಿಕೆ ೫೦

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಕರ್ನಾಟಕ ಅರಣ್ಯ ಇಲಾಖೆ**

**ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ**

**ಸಂಕ್ಷಿಪ್ತ ಮರು ಟೆಂಡರ್-ಕಂ-ಹರಾಜು ಪ್ರಕಟಣೆ**

**ಸಂಖ್ಯೆ: ಎ4:ಎಂಎಫ್‌ಪಿ:ಸಿಆರ್:83:2002-03, ದಿನಾಂಕ:25ನೇ ನವೆಂಬರ್ 2003**

**ವಿಷಯ:** 2003-05ನೇ ಸಾಲಿಗೆ ಶಿವಮೊಗ್ಗ ಅರಣ್ಯ ವಿಭಾಗದ ಕಿರು ಅರಣ್ಯ ಉತ್ಪನ್ನಗಳ ಸಂಗ್ರಹಣೆಯ ಮರು ಟೆಂಡರ್-ಕಂ-ಹರಾಜು ಕುರಿತು.

ಈ ಮೂಲಕ ಸಾರ್ವಜನಿಕರ ಗಮನಕ್ಕೆ ತರಬಯಸುವುದೇನೆಂದರೆ, ಶಿವಮೊಗ್ಗ ಅರಣ್ಯ ವಿಭಾಗಕ್ಕೆ ಸೇರಿದ ಅರಣ್ಯಗಳು, ಕಾದಿಟ್ಟ ಅರಣ್ಯಗಳು, ಕಿರು ಅರಣ್ಯಗಳು, ಅನುಭೋಗದಲ್ಲಿರುವ ಸರ್ಕಾರಿ ಜಮೀನು ಹಾಗೂ ಇತರೆ ಅರಣ್ಯ ಪ್ರದೇಶದಲ್ಲಿರುವ ನೆಡುತೋಪುಗಳಲ್ಲಿ (ವನ್ಯಜೀವಿ ಮತ್ತು ಜಂಟಿ ಅರಣ್ಯ ಯೋಜನೆಗಳ ಪ್ರದೇಶಗಳನ್ನು ಹೊರತುಪಡಿಸಿ) ಲಭ್ಯವಿರುವ ಈ ಕೆಳಕಂಡ ಕಿರು ಅರಣ್ಯ ಉತ್ಪನ್ನಗಳ ಬಾಬನ್ನು 2003-05ನೇ ಸಾಲಿಗೆ ಮರು ಟೆಂಡರ್-ಕಂ-ಹರಾಜನ್ನು ಮೂಲ ಖರೀದಿದಾರರ ಖರ್ಚು ಮತ್ತು ಜವಾಬ್ದಾರಿಯ ಮೇಲೆ ದಿನಾಂಕ: 26.12.2003 ರಂದು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಶಿವಮೊಗ್ಗ ವಿಭಾಗ, ಶಿವಮೊಗ್ಗ ಇವರ ಕಛೇರಿಯಲ್ಲಿ ಕೆಳ ಸಹಿದಾರರಾಗಲೀ ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಯವರು ಈ ಕೆಳಕಂಡ ಸ್ಥಳ, ಸಮಯ ಹಾಗೂ ದಿನಾಂಕದಂದು ಹರಾಜಿನ ಷರತ್ತಿಗೊಳಪಟ್ಟು ನಡೆಸಲಾಗುವುದು.

1. ಟೆಂಡರು ಸ್ವೀಕಾರದ ದಿನಾಂಕ : 26.12.2003
2. ಸಮಯ : ಮಧ್ಯಾಹ್ನ 4-00 ಘಂಟೆಯವರೆಗೆ
3. ಹರಾಜು ದಿನಾಂಕ : 26.12.2003 ಮಧ್ಯಾಹ್ನ 4-30 ಘಂಟೆಗೆ

**ಷೆಡ್ಯೂಲ್**

1. ತೀರ್ಥಹಳ್ಳಿ : ಸಾಲುಧೂಪ, ದಾಲ್ಚಿನ್ನಿ ಹಾಗೂ ಕಿರು ಕಾಡುತ್ಪನ್ನ

ಪಾವತಿಸಬೇಕಾಗಿರುವ ಇ.ಎಂ.ಡಿ. 2000-00 ರೂ.ಗಳು. ಹೆಚ್ಚಿನ ಮಾಹಿತಿಯನ್ನು ಈ ಕಛೇರಿಯಿಂದ ಪಡೆಯಬಹುದಾಗಿದೆ.

**ಜಿ. ಜಯರಾಮಯ್ಯ**
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಶಿವಮೊಗ್ಗ ವಿಭಾಗ, ಶಿವಮೊಗ್ಗ.

ಪಿ.ಆರ್. 787

**ತೋಟಗಾರಿಕೆ ಇಲಾಖೆ**

**ವಿಶೇಷ ಅಧಿಕಾರಿಗಳ ಕಛೇರಿ, ತೋಟಗಾರಿಕೆ ಇಲಾಖೆ, ನಂದಿಗಿರಿಧಾಮ, ಚಿಕ್ಕಬಳ್ಳಾಪುರ ತಾಲ್ಲೂಕು**

**ಟೆಂಡರ್-ಯಾ-ಬಹಿರಂಗ ಹರಾಜು ಪ್ರಕಟಣೆ**

**ಸಂ:ತೋಇ/ವಿಅ/ನಂದಿಗಿರಿ/ವಿನಿ1/53/03-04, ದಿನಾಂಕ:1ನೇ ಡಿಸೆಂಬರ್, 2003**

ಕೋಲಾರ ಜಿಲ್ಲೆ ಚಿಕ್ಕಬಳ್ಳಾಪುರ ತಾಲ್ಲೂಕು ನಂದಿಗಿರಿಧಾಮದಲ್ಲಿರುವ ಈ ಇಲಾಖಾಧೀನದ ಸ್ಯಾಂಕಿ ಬಿಲ್ಡಿಂಗ್‌ನಲ್ಲಿರುವ ಒಂದು ಚಿಲ್ಲರೆ ಅಂಗಡಿ ಮತ್ತು ಗಿರಿಧಾಮದ ಬಸ್ ನಿಲ್ದಾಣದಲ್ಲಿರುವ ಮತ್ತೊಂದು ಚಿಲ್ಲರೆ ಅಂಗಡಿಯನ್ನು ದಿನಾಂಕ: 01.02.2004 ರಿಂದ 31.01.2005 ರವರೆಗೆ ಒಂದು ವರ್ಷದ ಅವಧಿಗೆ ಸಾರ್ವಜನಿಕರ ಮೂಲಕ ನಡೆಸಲು ಉದ್ದೇಶಿಸಲಾಗಿದೆ. ನಿಗದಿತ ಟೆಂಡರ್

ಫಾರಂಗಳನ್ನು ದಿನಾಂಕ:20.01.2004ರೊಳಗೆ ಈ ಕಛೇರಿ ಕೆಲಸದ ಅವಧಿಯಲ್ಲಿ ರೂ. 100-00ಗಳನ್ನು ಸಂದಾಯಿಸಿ ಪಡೆಯಬಹುದಾಗಿದೆ. ಟೆಂಡರ್ ಸಲ್ಲಿಸಲು ಇಚ್ಛಿಸುವವರು ಟೆಂಡರ್‌ಗಳನ್ನು ಸೀಲ್ಡ್ ಮಾಡಿದ ಲಕೋಟೆಯಲ್ಲಿಟ್ಟು, ನಂದಿಗಿರಿಧಾಮದ ಶ್ರೀ ಯೋಗ ನಂದೀಶ್ವರ ಸ್ವಾಮಿ ದೇವಸ್ಥಾನದ ಪಕ್ಕದ ಚಿಲ್ಲರೆ ಅಂಗಡಿಗಾಗಿ ಅಥವಾ ಗಿರಿಧಾಮದ ಬಸ್ ನಿಲ್ದಾಣದಲ್ಲಿನ ಚಿಲ್ಲರೆ ಅಂಗಡಿಗಾಗಿ ಟೆಂಡರ್ ಎಂದು ಸ್ಪಷ್ಟವಾಗಿ ಬರೆದು ದಿನಾಂಕ: 21.01.2004 ರಂದು ಸಂಜೆ 5-30ರ ಒಳಗೆ ಈ ಕಛೇರಿಗೆ ಸಲ್ಲಿಸತಕ್ಕದ್ದು, ಬಹಿರಂಗ ಹರಾಜನ್ನು ದಿನಾಂಕ: 22.01.2004 ರಂದು ಸಂಜೆ 3-00 ಗಂಟೆಗೆ ತೋಟಗಾರಿಕೆ ನಿರ್ದೇಶನಾಲಯದ ಕ್ಷೇತ್ರ ವಾರ್ತಾ ಮತ್ತು ಪ್ರಚಾರ ಸಭಾಂಗಣ, ಲಾಲ್‌ಭಾಗ್, ಬೆಂಗಳೂರು-4ರಲ್ಲಿ ವ್ಯವಸ್ಥೆ ಮಾಡಲಾಗಿದೆ. ಆಸಕ್ತಿಯುಳ್ಳವರು ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಟೆಂಡರ್‌ನಲ್ಲಾಗಲಿ, ಬಹಿರಂಗ ಹರಾಜಿನಲ್ಲಾಗಲೀ ಭಾಗವಹಿಸಬಹುದು.

## ನಿಬಂಧನೆಗಳು

1. ಪ್ರತಿಯೊಂದು ಚಿಲ್ಲರೆ ಅಂಗಡಿಯ ಟೆಂಡರ್‌ನಲ್ಲಿ ಭಾಗವಹಿಸುವ ಬಿಡ್ಡುದಾರರು ಟೆಂಡರ್‌ನೊಂದಿಗೆ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ವಿಶೇಷ ಅಧಿಕಾರಿ ನಂದಿಗಿರಿಧಾಮ ಇವರ ಹೆಸರಿಗೆ ಪಡೆದ ರೂ. 10,000/-ಡಿ.ಡಿ.ಯನ್ನು ಲಗತ್ತಿಸಿ ಸಲ್ಲಿಸಬೇಕು. ಹಾಗೂ ಟೆಂಡರ್‌ನಲ್ಲಿ ಸೂಚಿಸಿರುವ ಮೊತ್ತದ ಶೇ. 50%ರಷ್ಟಕ್ಕೆ ಡಿ.ಡಿ.ಯನ್ನು ಈ ಕೆಳ ಸಹಿದಾರರ ಹೆಸರಿಗೆ ಪಡೆದು ಲಗತ್ತಿಸಿರಬೇಕು. ಹರಾಜಿನಲ್ಲಿ ಭಾಗವಹಿಸುವ ಪ್ರತಿಯೊಬ್ಬ ಬಿಡ್ಡುದಾರರ ಹರಾಜು ದಿನ ಸಂದರ್ಭದಲ್ಲಿ ರೂ. 10,000/- ನಗದು ಹಣ ಠೇವಣಿ ಇಡಬೇಕು.
2. ಬಹಿರಂಗ ಹರಾಜು ಮುಗಿದ ನಂತರ ನಿಗದಿತ ಅವಧಿಯೊಳಗೆ ಈ ಕಛೇರಿಗೆ ತಲುಪಿದ ಸೀಲ್ಡ್ ಟೆಂಡರ್‌ಗಳನ್ನು ಬಿಡ್ಡುದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಬಹಿರಂಗ ಹರಾಜಿನ ಅಂತಿಮ ಮೊತ್ತ ಅಥವಾ ಟೆಂಡರ್‌ನಲ್ಲಿ ನಮೂದಿಸಿರುವ ಮೊತ್ತಗಳೆರಡರ ಪೈಕಿ ಯಾವುದು ಹೆಚ್ಚಿನದಾಗಿ ಸರ್ಕಾರಕ್ಕೆ ಆದಾಯ ಬರುತ್ತದೆಯೋ ಅದನ್ನು ಪರಿಗಣಿಸಲಾಗುವುದು. ಅನುಮೋದಿಸಿದ ಬಿಡ್ಡಿನ ಶೇ. 50 ಭಾಗದ ಹಣವನ್ನು ಹರಾಜು ಮುಗಿದ ತಕ್ಷಣ ಹರಾಜು ಸ್ಥಳದಲ್ಲಿಯೇ ಪಾವತಿ ಮಾಡಬೇಕು. ತಪ್ಪಿದಲ್ಲಿ ಠೇವಣಿ ಹಣ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ಕಾನೂನು ಕ್ರಮ ಜರುಗಿಸಲಾಗುವುದು, ಉಳಿದ ಶೇ.50 ಭಾಗದ ಹಣವನ್ನು ಹರಾಜು ಯಾ ಟೆಂಡರ್‌ನ್ನು ತೋಟಗಾರಿಕೆ ನಿರ್ದೇಶಕರು ಅನುಮೋದನೆ ನೀಡಿದ ಕೂಡಲೇ ಅಂಗಡಿಯನ್ನು ಬಿಡ್ಡುದಾರರು ತಮ್ಮ ವಶಕ್ಕೆ ಪಡೆಯುವ ಮೊದಲು ಉಳಿದ ಶೇ.50 ಭಾಗದ ಹಣವನ್ನು ಪಾವತಿ ಮಾಡಬೇಕು. ಇಲ್ಲದಿದ್ದರೆ ಠೇವಣಿ ಹಣ ಮತ್ತು ಶೇ.50 ಭಾಗದ ಹಣ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
3. ಟೆಂಡರ್ ಸಲ್ಲಿಸಲು ಅಥವಾ ಹರಾಜಿನಲ್ಲಿ ಭಾಗವಹಿಸಲು ಕಟ್ಟಿದ ಠೇವಣಿ ಹಣವನ್ನು ಹರಾಜು ಮುಗಿದಾಕ್ಷಣ ಯಶಸ್ವಿ ಬಿಡ್ಡುದಾರರನ್ನು ಬಿಟ್ಟು ಉಳಿದವರಿಗೆ ಮರು ಸಂದಾಯವನ್ನು ಮಾಡಲಾಗುವುದು. ಹಾಗೂ ಯಶಸ್ವಿ ಬಿಡ್ಡುದಾರರು ಸರ್ಕಾರಕ್ಕೆ ಸಂದಾಯ ಮಾಡಿದ ಟೆಂಡರಿನ ಅಥವಾ ಹರಾಜಿನ ಹಣವನ್ನು ಚಿಲ್ಲರೆ ಅಂಗಡಿಗಳು ನಡೆಸಲಿ, ನಡೆಸದೆ ಇರಲಿ, ಹಣ ವಾಪಸ್ ಮಾಡಲಾಗುವುದಿಲ್ಲ. ಅಲ್ಲದೆ ಯಶಸ್ವಿ ಬಿಡ್ಡುದಾರರು ಅಂಗಡಿಗೆ ಸಂಬಂಧಿಸಿದ ವಿದ್ಯುಚ್ಛಕ್ತಿ ಬಿಲ್ಲುಗಳನ್ನು ಭರಿಸಬೇಕು ಮತ್ತು ಸರ್ಕಾರಿ ನಿಯಮಾನುಸಾರ ಅನ್ವಯವಾಗುವ ಯಾವುದೇ ಸ್ಥಳೀಯ ತೆರಿಗೆಗಳನ್ನು ಕಟ್ಟಲು ಬದ್ಧರಾಗಿರಬೇಕು.
4. ಅಂಗಡಿಯಲ್ಲಿ ಕಾಫಿ, ಟೀ ಮತ್ತು ಐಸ್ ಕ್ರೀಂಗಳನ್ನು ಮಾರಾಟ ಮಾಡಬಾರದು ಮತ್ತು ಅಂಗಡಿಯ ಮಾರಾಟ ಸಾಮಗ್ರಿಗಳನ್ನು ಹಾಗೂ ಅಂಗಡಿ ಸಾಮಗ್ರಿಗಳನ್ನು ವಿಶೇಷ ಅಧಿಕಾರಿಗಳು ಸೂಚಿಸುವ ಆವರಣದಲ್ಲಿ ಮಾತ್ರ ಇರಿಸಿ ವ್ಯಾಪಾರ ಮಾಡಬೇಕು. ಆವರಣವನ್ನು ಬಿಟ್ಟು ಇತರೆ ಸ್ಥಳಗಳಲ್ಲಿ ಅಂಗಡಿಯ ವಸ್ತುಗಳು ಮಾರಾಟ ಮಾಡಿದ್ದಲ್ಲಿ ಕಾನೂನು ಮತ್ತು ನಿಯಮಾವಳಿಗಳಂತೆ ಕ್ರಮ ಜರುಗಿಸಲಾಗುವುದು.
5. ಈ ಅಂಗಡಿಗಳ ಹರಾಜಿನ ಅವಧಿ ದಿನಾಂಕ: 01.02.2004 ರಿಂದ 31.01.2005 ಆಗಿದ್ದರೂ ಸರ್ಕಾರದ ಮತ್ತು ಸಾರ್ವತ್ರಿಕ ಹಿತ ದೃಷ್ಟಿಯಿಂದ ಹರಾಜಿನ ಅವಧಿಯನ್ನು ಮೊಟಕುಗೊಳಿಸುವ ಅಧಿಕಾರವನ್ನು ತೋಟಗಾರಿಕೆ ಇಲಾಖೆ ನಿರ್ದೇಶಕರು ಹೊಂದಿರುತ್ತಾರೆ. ಈ ಸಂದರ್ಭದಲ್ಲಿ ಹರಾಜಿನ ಮೊತ್ತವನ್ನು 365 ದಿವಸಗಳಲ್ಲಿ ವಿಭಜಿಸಿ ಬಳಕೆ ದಿನಗಳ ಮೊತ್ತ ಬಿಟ್ಟು ಉಳಿದ ಅಸಲು ಮಾತ್ರ ಹಿಂದಿರುಗಿಸುವ ಕ್ರಮ ವಹಿಸಲಾಗುವುದು, ಇದಕ್ಕೆ ಬಿಡ್ಡುದಾರರು ಬದ್ಧರಿರಬೇಕು.
6. ಯಶಸ್ವಿ ಬಿಡ್ಡುದಾರರ ಮೊತ್ತವನ್ನು ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4 ರವರಲ್ಲಿ ಕಾಯ್ದಿರಿಸಿದೆ ಮತ್ತು ಟೆಂಡರ್-ಯಾ-ಬಹಿರಂಗ ಹರಾಜುವಿನ ಅಂತಿಮ ತೀರ್ಮಾನ ತೋಟಗಾರಿಕೆ ನಿರ್ದೇಶಕರು, ಲಾಲ್‌ಭಾಗ್, ಬೆಂಗಳೂರು-4 ರವರಲ್ಲಿ ಕಾಯ್ದಿರಿಸಿದೆ.
7. ಯಶಸ್ವಿ ಬಿಡ್ಡುದಾರರು ತಮ್ಮ ಪರವಾಗಿ ಬೇರೆಯವರಿಂದ ಅಂಗಡಿ ನಡೆಸುವುದನ್ನು ಮತ್ತು ಅಂಗಡಿ ಪದಾರ್ಥಗಳನ್ನು ಬೇರೆಯವರ ಮೂಲಕ ಉಪ ಗುತ್ತಿಗೆ ಅಥವಾ ಇನ್ನಾವುದೇ ಕ್ರಮದ ಮೂಲಕ ಮಾರಾಟ ಮಾಡುವುದನ್ನು ನಿಷೇಧಿಸಿದೆ. ಹಾಗೆಯೇ ಶಬ್ದ ಮಾಲಿನ್ಯ ಉಂಟಾಗುವಂತಹ ಟೇಪ್‌ರೆಕಾರ್ಡರ್ಸ್ ಮತ್ತು ಧ್ವನಿವರ್ಧಕಗಳ ಬಳಕೆ ಸಹ ನಿಷೇಧಿಸಲಾಗಿದೆ.
8. ಯಶಸ್ವಿ ಬಿಡ್ಡುದಾರರು ಟೆಂಡರ್-ಯಾ-ಬಹಿರಂಗ ಹರಾಜಿನಲ್ಲಿ ಠೇವಣಿ ಹಣದ ಪೈಕಿ ರೂ. 5,000/-ವನ್ನು ಬಡ್ಡಿ ರಹಿತ ಟೆಂಡರ್-ಯಾ-ಹರಾಜು ಅವಧಿ ನಂತರ ಅಂಗಡಿಯನ್ನು ಸುಸ್ಥಿತಿಯಲ್ಲಿ ವಿದ್ಯುಚ್ಛಕ್ತಿ ಬಿಲ್ಲುಗಳು ಯಾವುದೇ ಬಾಕಿಯಿಲ್ಲದಂತೆ ತೀರ್ಣಗೊಳಿಸಿದ್ದರೆ ಮಾತ್ರ ಹಿಂದಿರುಗಿಸಲಾಗುವುದು. ಸರ್ಕಾರದ ಆಸ್ತಿಗೆ ಧಕ್ಕೆ ಅಥವಾ ಬಾಕಿ ಸಂದರ್ಭದಲ್ಲಿ ಸದರಿ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೂ ಯಶಸ್ವಿ ಬಿಡ್ಡುದಾರರು ಮೇಲಿನ ಎಲ್ಲಾ ಷರತ್ತುಗಳನ್ನು ಒಪ್ಪಿ ಅಂಗಡಿಯನ್ನು ಪಡೆಯುವ ಮೊದಲು ರೂ. 100 ಛಾಪಾ ಕಾಗದದಲ್ಲಿ ನೋಟರಿಯವರೆದುರು ಇಲಾಖೆಗೆ ಕರಾರು ಪತ್ರ ಬರೆದು ಕೊಡಬೇಕು.

9. ಈ ಟೆಂಡರ್-ಯಾ-ಬಹಿರಂಗ ಹರಾಜು ವಿಷಯದಲ್ಲಿ ಉದ್ಭವವಾಗುವ ಯಾವುದೇ ತರಹವಾದ ತಂಟೆ ತಕರಾರುಗಳನ್ನು ತೀರ್ಣಗೊಳಿಸುವ ಅಧಿಕಾರ ತೋಟಗಾರಿಕೆ ನಿರ್ದೇಶಕರು, ಲಾಲ್‌ಭಾಗ್, ಬೆಂಗಳೂರು-4ರವರು ಹೊಂದಿದ್ದು ಈ ಹರಾಜಿನಲ್ಲಿ ಭಾಗವಹಿಸುವವರು ಇದಕ್ಕೆ ಬದ್ಧರಾಗಿರಬೇಕು.

ವಿಶೇಷ ಅಧಿಕಾರಿ,
ನಂದಿಗಿರಿಧಾಮ.

ಪಿ.ಆರ್.788

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

## ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಕಾವೇರಿ ಭವನ, 7ನೇ ಮಹಡಿ, ಜಲಮಂಡಳಿ ಕಟ್ಟಡ, ಬೆಂಗಳೂರು ಇವರ ನಡವಳಿಗಳು

## ಪ್ರಥಮ ದರ್ಜೆ ಸಹಾಯಕರ ಅಂತಿಮ ಆಯ್ಕೆ ಪಟ್ಟಿ

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಗುರುತಿಸಲ್ಪಟ್ಟ ಮೂರು ಪರಿಶಿಷ್ಟ ಜಾತಿಯ ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸುವ ಕುರಿತು.

**ಉಲ್ಲೇಖ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಸೆನೆನಿ 2001 ದಿನಾಂಕ: 13.02.01
3. ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲ್ಯೂಡಿ 132 ಎಸ್‌ಎಡಿ 97 ದಿನಾಂಕ:08.02.2000.
4. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ:01.06.2002 (ದಿನಾಂಕ: 14.06.2002ರಂದು ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ.)
5. ಈ ಕಛೇರಿಯ ಸಮಸಂಖ್ಯೆ ಅಧಿಸೂಚನೆ ದಿನಾಂಕ: 30.01.2002 (ದಿನಾಂಕ: 14.02.2002 ರಂದು ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ.)
6. ಈ ಕಛೇರಿಯ ಸಮಸಂಖ್ಯೆ ತಾತ್ಕಾಲಿಕ ಆಯ್ಕೆ ಪಟ್ಟಿ ದಿನಾಂಕ: 24.03.03.

**ಪ್ರಸ್ತಾವನೆ:**

ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಕೆಳಕಂಡ ಮೀಸಲಾತಿ ವರ್ಗೀಕರಣದ ಪ್ರಕಾರ ಗುರುತಿಸಲ್ಪಟ್ಟ ಪರಿಶಿಷ್ಟ ಜಾತಿಯ ಮೂರು ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಗಳ ನೇರ ನೇಮಕಾತಿಗಾಗಿ ಉಲ್ಲೇಖ (1) (2) ಮತ್ತು (4)ರಲ್ಲಿ ಪ್ರಕಟಿಸಿರುವ ನಿಯಮಗಳನ್ವಯ ಉಲ್ಲೇಖ (5)ರ ಈ ಕಛೇರಿಯ ಅಧಿಸೂಚನೆಯಲ್ಲಿ ಪ್ರಕಟಣೆ ಹೊರಡಿಸಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಕರೆಯಲಾಗಿತ್ತು.

| ಕ್ರ.ಸಂ. | ಮೀಸಲಾತಿ ವರ್ಗೀಕರಣ | ಪರಿಶಿಷ್ಟ ಜಾತಿ |
|---|---|---|
| 1. | ಸಾಮಾನ್ಯ ಅರ್ಹತೆ ಅಭ್ಯರ್ಥಿ | 1 |
| 2. | ಮಹಿಳಾ ಅಭ್ಯರ್ಥಿ | 1 |
| 3. | ಗ್ರಾಮೀಣ ಅಭ್ಯರ್ಥಿ | 1 |
| | **ಒಟ್ಟು** | **3** |

ಈ ಬಗ್ಗೆ ಸ್ವೀಕೃತವಾದ ಅರ್ಜಿಗಳನ್ನು ಪರಿಶೀಲಿಸಿ ಉಲ್ಲೇಖ (1)ರಲ್ಲಿನ ನಿಯಮಗಳನ್ವಯ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅಭ್ಯರ್ಥಿಗಳಲ್ಲಿ ಹೆಚ್ಚು ಅಂಕ ಗಳಿಸಿದವರನ್ನು ಅರ್ಹತೆ ಮತ್ತು ಮೀಸಲಾತಿ ಆಧಾರದ ಮೇಲೆ ಪ್ರಥಮ ದರ್ಜೆ ಸಹಾಯಕರೆಂದು ತಾತ್ಕಾಲಿಕವಾಗಿ ಆಯ್ಕೆ ಮಾಡಿ, ಉಲ್ಲೇಖ (4)ರ ನಿರ್ದೇಶನದನ್ವಯ 1:1ರ ಪ್ರಮಾಣದಲ್ಲಿ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಉಲ್ಲೇಖ (6)ರನ್ವಯ ದಿನಾಂಕ: 24.03.2003 ರಂದು ಪ್ರಕಟಿಸಿ ಸದರಿ ಆಯ್ಕೆಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅವುಗಳನ್ನು 30 (ಮೂವತ್ತು) ದಿನಗಳಲ್ಲಿ ಲಿಖಿತ ಮೂಲಕ ಈ ಪ್ರಾಧಿಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿತ್ತು. ಹಾಗೂ ತಾತ್ಕಾಲಿಕ ಆಯ್ಕೆಪಟ್ಟಿಯಲ್ಲಿರುವ ಅಭ್ಯರ್ಥಿಗಳಿಗೆ ಅವರ ವಿದ್ಯಾರ್ಹತೆಗೆ ಸಂಬಂಧಿಸಿದ ಮೂಲ ದಾಖಲೆಗಳನ್ನು ಪರಿಶೀಲನೆಗಾಗಿ 30 ದಿನಗಳಲ್ಲಿ ಹಾಜರ್ ಪಡಿಸುವಂತೆ ದಿನಾಂಕ:11.04.2003ರನ್ವಯ ಆರ್‌ಪಿಎಡಿ ಮೂಲಕ ನೀಡಿದ ಹಿಂಬರಹದಲ್ಲಿ ತಿಳಿಸಲಾಗಿತ್ತು.

ಈ ವಿಚಾರದಲ್ಲಿ ಈವರೆವಿಗೂ ಯಾವುದೇ ಅಭ್ಯರ್ಥಿಗಳಿಂದ ಆಕ್ಷೇಪಣೆಗಳು ಬಂದಿರುವುದಿಲ್ಲ ಹಾಗೂ ಆಕ್ಷೇಪಣೆಗಳನ್ನು ಸಲ್ಲಿಸಲು ನಿಗದಿಪಡಿಸಲಾಗಿದ್ದ 30 ದಿನಗಳ ಅವಧಿಯು ಸಹ ಮುಕ್ತಾಯವಾಗಿರುತ್ತದೆ. ಉಲ್ಲೇಖ (6)ರನ್ವಯ ಪ್ರಕಟಿಸಿದ ತಾತ್ಕಾಲಿಕ ಆಯ್ಕೆಪಟ್ಟಿಯಲ್ಲಿರುವ ಪರಿಶಿಷ್ಟ ಜಾತಿಯ ಎಲ್ಲಾ ಅಭ್ಯರ್ಥಿಗಳ ಪೂರ್ವ ಚರಿತ್ರಾ ವರದಿಗಳು ಪೊಲೀಸ್ ಇಲಾಖೆಯಿಂದ ಬಂದಿರುತ್ತವೆ. ಹಾಗೂ ಸದರಿ ತಾತ್ಕಾಲಿಕ ಆಯ್ಕೆಪಟ್ಟಿಯ ಹೆಚ್ಚುವರಿ ಪಟ್ಟಿಯಲ್ಲಿರುವ ಪರಿಶಿಷ್ಟ ಜಾತಿಯ ಮಹಿಳಾ ಅಭ್ಯರ್ಥಿಯಾದ ಶ್ರೀಮತಿ ವಿ. ಗೀತಾ ಇವರನ್ನು ಹೊರತುಪಡಿಸಿ ಉಳಿದ ಪರಿಶಿಷ್ಟ ಜಾತಿಯ ಎಲ್ಲಾ ಅಭ್ಯರ್ಥಿಗಳ ಜಾತಿ ಸಿಂಧುತ್ವ ಪ್ರಮಾಣ ಪತ್ರಗಳು ಸಹ ಸಕ್ಷಮ ಪ್ರಾಧಿಕಾರದಿಂದ ಬಂದಿರುತ್ತವೆ.

ಈ ರೀತಿ ತಾತ್ಕಾಲಿಕ ಆಯ್ಕೆಪಟ್ಟಿಯ ಮುಖ್ಯಪಟ್ಟಿಯಲ್ಲಿರುವ ಮೂರು ಪರಿಶಿಷ್ಟ ಜಾತಿ ಅಭ್ಯರ್ಥಿಗಳ ಎಲ್ಲಾ ದಾಖಲೆಗಳು ಸಕ್ಷಮ ಪ್ರಾಧಿಕಾರದಿಂದ ಬಂದಿರುವುದರಿಂದ, ಹಾಗೂ ಹೆಚ್ಚುವರಿ ಪಟ್ಟಿಯಲ್ಲಿರುವ ಪರಿಶಿಷ್ಟ ಜಾತಿಯ ಶ್ರೀಮತಿ ವಿ. ಗೀತಾ ರವರ ಜಾತಿ ಸಿಂಧುತ್ವ ಪ್ರಮಾಣ ಪತ್ರವು ಬಾರದೇ ಇರುವುದರಿಂದ ಅದನ್ನು ಹಾಜರ್ ಪಡಿಸಬೇಕೆಂಬ ಷರತ್ತಿಗೆ ಒಳಪಡಿಸಿ ಪರಿಶಿಷ್ಟ ಜಾತಿಯ ಪ್ರಥಮ ದರ್ಜೆ ಸಹಾಯಕರ ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸುವುದು ಸೂಕ್ತವೆಂದು ಮನಗಂಡು ಕೆಳಕಂಡಂತೆ ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಗಿದೆ.

**ಪ್ರಥಮ ದರ್ಜೆ ಸಹಾಯಕರ ಅಂತಿಮ ಆಯ್ಕೆ ಪಟ್ಟಿ ಅಧಿಸೂಚನೆ**

**ಸಂಖ್ಯೆ: ಇಎಸ್‌ಟಿ 1-270:2001-02, ದಿನಾಂಕ: 24ನೇ ನವೆಂಬರ್, 2003**

ಆದ್ದರಿಂದ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಮತ್ತು ಉಲ್ಲೇಖ (1)ರಲ್ಲಿನ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಗುರುತಿಸಲ್ಪಟ್ಟ ಮೂರು ಪರಿಶಿಷ್ಟ ಜಾತಿಯ ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (1)ರಲ್ಲಿನ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಕೆಳಕಂಡ ಪರಿಶಿಷ್ಟ ಜಾತಿಯ ಅರ್ಹ ಅಭ್ಯರ್ಥಿಗಳನ್ನು ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಪ್ರಥಮ ದರ್ಜೆ ಸಹಾಯಕರೆಂದು ಅಂತಿಮವಾಗಿ ಆಯ್ಕೆ ಮಾಡಿ ಪ್ರಥಮ ದರ್ಜೆ ಸಹಾಯಕರ ಅಂತಿಮ ಆಯ್ಕೆಪಟ್ಟಿಯನ್ನು ಉಲ್ಲೇಖ (1)ರ ಅಧಿಸೂಚನೆಯಲ್ಲಿನ ನಿಯಮ-6 ರನ್ವಯ ಅಭ್ಯರ್ಥಿಗಳ ಮಾಹಿತಿಗಾಗಿ ಈ ಮೂಲಕ ಪ್ರಕಟಿಸಲಾಗಿದೆ.

(i) ಇಲಾಖೆಯ ಹೆಸರು : ನೋಂದಣಿ ಮತ್ತು ಮುದ್ರಾಂಕ ಇಲಾಖೆ

(ii) ನೇಮಕಾತಿ ಪ್ರಾಧಿಕಾರಿ : ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು.

(iii) ಹುದ್ದೆಯ ಹೆಸರು : ಪ್ರಥಮ ದರ್ಜೆ ಸಹಾಯಕ

**ಅಂತಿಮ ಆಯ್ಕೆ ಮುಖ್ಯಪಟ್ಟಿ (Final Selection Main List)**

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | 16.03.2002ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ-ತಿಂ-ದಿ | ವಿದ್ಯಾರ್ಹತೆ | ಶೇಕಡವಾರು ಅಂಕಗಳು | ಮೀಸಲಾತಿ ವರ್ಗೀಕರಣ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಶ್ರೀ ಶಿವಪುತ್ರ ತಂಗಾ S/o ತಿಪ್ಪಣ್ಣ ಮು: ಕಲ್ಲೂರ, ತಾ: ಹುಮನಾಬಾದ ಜಿ: ಬೀದರ್-585 330 | 26.01.1971 | 31.01.13 | B.Sc (Agri) | 80.200 | ಪರಿಶಿಷ್ಟ ಜಾತಿ ಸಾಮಾನ್ಯ ಅರ್ಹತೆ ಅಭ್ಯರ್ಥಿ |
| 2. | ಶಂಕರೆಪ್ಪ ಡೊಳ್ಳಿನ S/o ರಾವತಪ್ಪ ಮು: ಪೋಸ್ಟ್: ಮಣೂರ ತಾ: ಸಿಂಧಗಿ ಜಿಲ್ಲೆ: ಬಿಜಾಪುರ | 20.06.1969 | 32.08.26 | B.Sc (Agri) | 79.100 | ಪರಿಶಿಷ್ಟ ಜಾತಿ ಗ್ರಾಮೀಣ ಅಭ್ಯರ್ಥಿ |
| 3. | ಹೆಚ್.ಟಿ. ಲಲಿತಾ W/o R. ವಾಸುದೇವ ಹುಳಿಯಾರು ರಸ್ತೆ ಪೋಸ್ಟ್ ಆಫೀಸ್ ಹಿರಿಯೂರು-572 143 | 20.07.1970 | 31.07.26 | B.H. Sc- | 70.000 | ಪರಿಶಿಷ್ಟ ಜಾತಿ ಮಹಿಳಾ ಅಭ್ಯರ್ಥಿ |

**ಅಂತಿಮ ಆಯ್ಕೆ ಹೆಚ್ಚುವರಿ ಪಟ್ಟಿ (Final Selection Additional List)**

| 1 | 2 | 3 | 4 | 5 | 6 | 7 |
|---|---|---|---|---|---|---|
| 1. | ಶ್ರೀ ಶಿವಪುತ್ರ S/o ಶಂಕರಪ್ಪ ಭಜಂತ್ರಿ ಮುಕ್ಕಾಂ ಪೋಸ್ಟ್, ಹತ್ತಿರಕಿಹಾಳ 586 122 ತಾ: ಬ. ಬಾಗೇವಾಡಿ ಜಿ: ಬಿಜಾಪುರ | 01.06.1969 | 32.09.15 | B.Sc (Ag. Maco) | 79.200 | ಪರಿಶಿಷ್ಟ ಜಾತಿ ಸಾಮಾನ್ಯ ಅರ್ಹತೆ ಅಭ್ಯರ್ಥಿ (ಹೆಚ್ಚುವರಿ) |

| 1 | 2 | 3 | 4 | 5 | 6 | 7 |
|---|---|---|---|---|---|---|
| 2. | ಶ್ರೀ ನಾಗರಾಜ ಟಿ.<br>S/o ತಿರುಮಲಪ್ಪ ಹೆಚ್.<br>ಬೀರಲಿಂಗೇಶ್ವರ ದೇವಸ್ಥಾನದ ಹತ್ತಿರ, ಕುರುಬರ ಬೀದಿ<br>ಹೊಳಲ್ಕೆರೆ-577 526 | 20.05.1970 | 31.09.26 | B.Sc (Agri) | 75.100 | ಪರಿಶಿಷ್ಟ ಜಾತಿ ಗ್ರಾಮೀಣ ಅಭ್ಯರ್ಥಿ (ಹೆಚ್ಚುವರಿ) |
| 3. | ವಿ. ಗೀತಾ<br>D/o ವಿಜಯಪ್ರಕಾಶ್<br>C/o ಪ್ರಮೋದ ವಿ. ದೇಶಪಾಂಡೆ<br>ಪಿಂಟೋರೋಡ್ 1:16,<br>ಟೆಲಿಫೋನ್ ಆಫೀಸ್ ಪಕ್ಕ,<br>ಹುಬ್ಬಳ್ಳಿ-580 020. | 20.06.1972 | 29.08.26 | B.A. | 59.311 | ಪರಿಶಿಷ್ಟ ಜಾತಿ ಮಹಿಳಾ ಅಭ್ಯರ್ಥಿ (ಹೆಚ್ಚುವರಿ) |

ಈ ಅಂತಿಮ ಆಯ್ಕೆ ಪಟ್ಟಿಯಲ್ಲಿರುವ ಅಭ್ಯರ್ಥಿಗಳ ಆಯ್ಕೆಯು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.

**ಷರತ್ತುಗಳು:**

1. ಮಹಿಳಾ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಮೇಲ್ಕಂಡ ಮಹಿಳಾ ಅಭ್ಯರ್ಥಿಗಳು ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232/99 (ಶ್ರೀ ಬಿ.ಎಲ್. ನಾರಾಯಣ -VS- ಕರ್ನಾಟಕ ರಾಜ್ಯ ಮತ್ತು ಇತರರು) ಇದರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧರಾಗಿರತಕ್ಕದ್ದು ಹಾಗೂ ಈ ಆಯ್ಕೆ ಪಟ್ಟಿಯಲ್ಲಿರುವ ಮೇಲ್ಕಂಡ ಮಹಿಳಾ ಅಭ್ಯರ್ಥಿಗಳು ಪ್ರಥಮ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದ್ದಲ್ಲ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ತಿಳಿಯತಕ್ಕದ್ದು.
2. ಆಯ್ಕೆಯಾದ ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಶಾಶ್ವತವಾಗಿ ರದ್ದುಪಡಿಸಲಾಗುವುದು.
3. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಟ್ಟಿರುತ್ತದೆ.
4. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕ ಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಮತ್ತು ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಶಾಶ್ವತವಾಗಿ ರದ್ದು ಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ K.C.S. (CCA) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
5. ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳು ಗ್ರಾಮೀಣ ಅಭ್ಯರ್ಥಿಗಳಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ರದ್ದು ಪಡಿಸಲಾಗುವುದು.
6. ಈ ಪಟ್ಟಿಯ ಮೂಲಕ ಆಯ್ಕೆಯಾದ ಅಭ್ಯರ್ಥಿಗಳ ನೇಮಕಾತಿಯು ರದ್ದಾದ ಪಕ್ಷದಲ್ಲಿ ಅಂತಹವರ ಬದಲಿಗೆ ಅರ್ಹತೆ ಮತ್ತು ಮೀಸಲಾತಿ ಆಧಾರದ ಮೇಲೆ ಬೇರೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು.
7. ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕದ ಯಾವುದೇ ಭಾಗದಲ್ಲಾದರೂ ಕೆಲಸ ಮಾಡಲು ಸಿದ್ಧರಾಗಿರಬೇಕು.
8. ಈ ಆಯ್ಕೆ ಪಟ್ಟಿಯು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
9. ಹೆಚ್ಚುವರಿ ಪಟ್ಟಿಯಲ್ಲಿ ಆಯ್ಕೆಯಾಗಿರುವ ಯಾವುದೇ ಅಭ್ಯರ್ಥಿಗಳು ತಮ್ಮ ನೇಮಕಾತಿ ವಿಷಯದಲ್ಲಿ ಪ್ರಥಮ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದ್ದಲ್ಲ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲ.
10. ಹೆಚ್ಚುವರಿ ಪಟ್ಟಿಯಲ್ಲಿರುವ ಶ್ರೀಮತಿ ವಿ. ಗೀತಾ, ಹುಬ್ಬಳ್ಳಿ ವಾಸಿ ಇವರು ತಮ್ಮ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಹಾಜರು ಪಡಿಸತಕ್ಕದೆಂಬ ಷರತ್ತಿಗೆ ಒಳಪಡಿಸಿದೆ.

**ಲುಕೋಸ್ ವಲ್ಲತರೈ**
ಆಯ್ಕೆ ಪ್ರಾಧಿಕಾರಿ ಹಾಗೂ ನೋಂದಣಿ
ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ
ಆಯುಕ್ತರು, ಬೆಂಗಳೂರು.

ಪಿ.ಆರ್.789

**IN THE COURT OF THE CITY CIVIL JUDGE AT BANGALORE**
**P & S.C. No. 26/2003**
**(CCH:11)**

**Between:**
Smt. Ammayamma
Aged about 93 years
Mother of late Sri Nagendra
Residing at No. 35/1,
3rd Cross Road, ……….Petitioner
Atmananda Colony,
Sultan Palya,
Bangalore-560 032.
**And:**
NIL …….Respondents

WHEREAS, the Petitioner above named filed the above petition under Section 372 of Indian Succession Act, 1975 for grant of Succession Certificate with respect to the schedule assets left by late Sri Nagendra, who died on 14.11.2000 at Bangalore. The said assets are mentioned in the schedule hereunder.

**SCHEDULE**

1. Rs. 50,000/- (Rupees fifty thousand only) with accrued interest in the fixed deposit account of late Sri Nagendra with Corporation Bank, Rajajinagar Branch, Dr. Rajkumar Road, Bangalore.
2. Rs. 21,000/- (Rupees twenty one thousand only) in S.B. Account of late Sri Nagendra, bearing No. 24157, with Corporation Bank, Rajajinagar Branch, Dr. Rajkumar Road, Bangalore.
3. Royalty amount payable to deceased Nagendra, as his share from the Indian Performing Right Society Ltd., No.D-1, Parsen Complex, 2nd floor, G.N. Chetty Road, Chennai-600 017.

Now, the said petition is pending on the file of the Additional City Civil Court (CCH-11) Bangalore and the same is now posted to 20.01.2004, at 11 AM for hearing.

Any person/s having objection for the same, may appear on the said date in the above mentioned court in person or by a duly authorized pleader and in default of appearance the said petition will be heard and determined in accordance with law.

Given under my hand and seal of the court on 5th day of December 2003.

By Order of the Court,
Assistant Registrar,
City Civil Court,
Bangalore.

PD-91

**ಅಬಕಾರಿ ಇಲಾಖೆ**

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್‌ರವರ ಕಛೇರಿ, ಮಂಡ್ಯ ಜಿಲ್ಲೆ, ಮಂಡ್ಯ**

**ಹರಾಜು ಪ್ರಕಟಣೆ**

**ಸಂಖ್ಯೆ:ಇಎಕ್ಸ್‌ಇ/ಎಂಡಿವೈ/ಎಸ್.ಆರ್/84/92-93, ದಿನಾಂಕ:6ನೇ ಡಿಸೆಂಬರ್, 2003**

**ವಿಷಯ:** ಅನುಪಯುಕ್ತಗೊಳಿಸಿದ ವಾಹನ ಅಂಬಾಸಿಡರ್ ಕಾರ್ ಸಂಖ್ಯೆ: ಸಿಎಜಿ 4448ನ್ನು ಟೆಂಡರ್ ಕಮ್ ಬಹಿರಂಗ ಹರಾಜು ಮುಖೇನ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:** 1. ಅಬಕಾರಿ ಆಯುಕ್ತರು ಬೆಂಗಳೂರು ಇವರ ಪತ್ರದ ಸಂಖ್ಯೆ:ಇಸಿಇ/06/ವಿಇಹೆಚ್/99, ದಿನಾಂಕ:15.11.03.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರಿಗೆ ಸರ್ಕಾರದಿಂದ ಒದಗಿಸಲಾದ ಅಂಬಾಸಿಡರ್ ಕಾರ್ ಸಂಖ್ಯೆ: ಸಿಎಜಿ 4448 ನ್ನು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ/142:ಶಿವಾನಿ/2000 ದಿನಾಂಕ: 05.01.2001ರಲ್ಲಿ ಅನುಪಯುಕ್ತಗೊಳಿಸಿರುವುದಾಗಿ ಉಲ್ಲೇಖದಲ್ಲಿ ನಮೂದಿಸಿರುವ ಪತ್ರದ ಹಿನ್ನೆಲೆಯಲ್ಲಿ ಸದರಿ ವಾಹನವನ್ನು ಟೆಂಡರ್ ಕಮ್ ಬಹಿರಂಗ ಹರಾಜು ಮುಖೇನ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ಕಛೇರಿಯ ಮುಂದೆ ಅಬಕಾರಿ ಅಧೀಕ್ಷಕರು, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್‌ರವರ ಪರವಾಗಿ ದಿನಾಂಕ: 23.12.2003 ಬೆಳಿಗ್ಗೆ 11 ಗಂಟೆಗೆ ವಿಲೇವಾರಿ ಮಾಡಲಾಗುವುದು ಆಸಕ್ತಿ ಉಳ್ಳವರು ವಾಹನವನ್ನು ಪಡೆಯಲು ಇಚ್ಛೆ ಉಳ್ಳವರು ಮೇಲ್ಕಂಡ ಕಛೇರಿಗೆ ಬಂದು ಕಛೇರಿ ವೇಳೆಯಲ್ಲಿ ಪರಿಶೀಲಿಸಬಹುದಾಗಿದೆ ಹಾಗೂ ಕೆಳಕಂಡ ಷರತ್ತುಗಳನ್ನು ವಿಧಿಸಲಾಗಿದೆ.

**ಷರತ್ತುಗಳು**

1. ಆಸಕ್ತಿ ಉಳ್ಳವರು ಮುಂಗಡ ಠೇವಣಿ ಹಣ ರೂ. 10,000ಗಳನ್ನು ಕಛೇರಿಯಲ್ಲಿ ನಗದು ರೂಪದಲ್ಲಿ ಪಾವತಿಸಿ ಟೆಂಡರನ್ನು ಹಾಕಬಹುದು ನಂತರ ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದು.
2. ಯಶಸ್ವಿ ಸವಾಲುದಾರರು ಉಳಿದ ಟೆಂಡರ್ ಕಮ್ ಹರಾಜಿನಲ್ಲಿ ಬಂದ ಹೆಚ್ಚಿನ ಹಣವನ್ನು ಕೂಡಲೇ ಪಾವತಿಸತಕ್ಕದ್ದು ಮತ್ತು ಚಾಲ್ತಿಯಲ್ಲಿ ಇರುವ ಮಾರಾಟ ತೆರಿಗೆ ಇತ್ಯಾದಿಯನ್ನು ಪಾವತಿಸತಕ್ಕದ್ದು.
3. ಹರಾಜು ನಿರ್ವಹಣಾ ಅಧಿಕಾರಿಯ ತೀರ್ಮಾನವು ಅಂತಿಮವಾಗಿದ್ದು ಟೆಂಡರ್ ಕಮ್ ಹರಾಜನ್ನು ಒಪ್ಪುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್‌ರವರು ಹೊಂದಿರುತ್ತಾರೆ.
4. ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರಿಂದ ಸ್ಥಿರೀಕರಣ ಪಡೆದ ನಂತರ ವಾಹನವನ್ನು ಯಶಸ್ವಿ ಸವಾಲುದಾರರಿಗೆ ಬಿಡುಗಡೆ ಮಾಡಲಾಗುವುದು.
5. ವಾಹನವನ್ನು ಎಲ್ಲಿದೆಯೋ ಮತ್ತು ಹೇಗಿದೆಯೋ ಹಾಗೆ ವಿಲೇವಾರಿ ಮಾಡಲಾಗುವುದು.
6. ಹರಾಜಿನಲ್ಲಿ ಭಾಗವಹಿಸಿ ಯಶಸ್ವಿಯಾಗದಿರುವ ಸವಾಲುದಾರರ ಠೇವಣಿ ಹಣವನ್ನು ಹಿಂದಿರುಗಿಸಲಾಗುವುದು.
7. ಹರಾಜನ್ನು ನಡೆಸುವಾಗ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನೀಡಿದಂತಹ ಅಂದಾಜು ಬೆಲೆಯನ್ನು ಆಧಾರವಾಗಿ ಇಟ್ಟುಕೊಳ್ಳಲಾಗುವುದು.

ಪಿ.ಆರ್.790

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್‌ರವರ ಪರವಾಗಿ

## ಕಾರ್ಯನಿರ್ವಾಹಕ ಇಂಜಿನಿಯರ್‌ರವರ ಕಾರ್ಯಾಲಯ, ಲೋಕೋಪಯೋಗಿ ಇಲಾಖೆ ವಿಭಾಗ, ತುಮಕೂರು

## ಟೆಂಡರ್ ಪ್ರಕಟಣೆ

**ಸಂಖ್ಯೆ:ಕಾನಿಇಂ:ಲೋಇವಿತು:ಡಿಬಿ 1:ಟೆಂಡರ್ 19/2003-04, ದಿನಾಂಕ: 11ನೇ ನವಂಬರ್, 2003**

ಲೋಕೋಪಯೋಗಿ ಇಲಾಖೆ ಸಂಹಿತೆ ಭಾಗ-11 ಪಿಡಬ್ಲ್ಯೂಡಿ-65 ನಿಭಂಧನೆಗೊಳಪಟ್ಟು ಅರ್ಹ ದರ್ಜೆಯ ಲೋಕೋಪಯೋಗಿ ಇಲಾಖೆಯ ನೊಂದಾಯಿತ ಗುತ್ತಿಗೆದಾರರುಗಳಿಂದ ಕಾಮಗಾರಿಗಳಿಗೆ ಮೊಹರು ಮಾಡಲಾದ ಎರಡು ಲಕೋಟೆಯ ಪದ್ದತಿಯಂತೆ ಕಾಮಗಾರಿಗಳಿಗೆ ಟೆಂಡರು ಸಲ್ಲಿಸಲು ಇಚ್ಛಿಯುಳ್ಳವರು ಮನವಿಯನ್ನು ಕಾಮಗಾರಿಯ ಎದುರು ನಮೂದಿಸಿರುವ ಮೊತ್ತದ ಡಿ.ಡಿ.ಯೊಂದಿಗೆ ಕಾರ್ಯಪಾಲಕ ಇಂಜಿನಿಯರ್, ಲೋಇ: ತುಮಕೂರು ವಿಭಾಗ, ತುಮಕೂರು ರವರ ಹೆಸರಿಗೆ ಜಮಾ ಮಾಡಿದಂತೆ ಕೆಳಗೆ ಸಹಿ ಮಾಡಿರುವ ಕಛೇರಿಗೆ ದಿನಾಂಕ:12.01.2004ರಂದು ಸಂಜೆ 5.00 ಗಂಟೆಯೊಳಗಾಗಿ ಮನವಿಯೊಂದಿಗೆ ಸಲ್ಲಿಸತಕ್ಕದ್ದು. ನಂತರ ಬಂದ ಮನವಿಗಳನ್ನು ಪರಿಗಣಿಸಲಾಗುವುದಿಲ್ಲ. ಕಾಮಗಾರಿಗೆ ಸಂಬಂಧಿಸಿದ ಮುದ್ರಿತ ದಾಸ್ತಾವೇಜುಗಳು, ಮುದ್ರಿತ ಕರಾರುಗಳು, ರೇಖಾ ಚಿತ್ರಗಳು, ಕಾಮಗಾರಿಗಳ ಪೂರ್ಣ ತಪಶೀಲು ಪರಿಣಾಮ ಇತ್ಯಾದಿಗಳಲ್ಲದೇ ಕರಾರು ಷರತ್ತುಗಳನ್ನೊಳಗೊಂಡ ಟೆಂಡರ್ ದಾಖಲಾತಿಗಳಿಗಾಗಿ ದಿನಾಂಕ:14.01.2004ರಂದು ಬೆಳಗ್ಗೆ 10.00 ರಿಂದ ಸಂಜೆ 5.00 ಗಂಟೆಯೊಳಗಾಗಿ ಪಡೆಯಬಹುದು ಅಗತ್ಯವಿರುವ ಪೂರ್ವ ಅರ್ಹತೆಗಳನ್ನು ಟೆಂಡರ್ ದಾಸ್ತಾವೇಜು ಸವಿವರವಾಗಿ ನಮೂದಿಸಲಾಗಿರುತ್ತದೆ.

ಗುತ್ತಿಗೆದಾರರು ಸ್ವತಃ ಕಾಂಕ್ರೀಟ್ ಮಿಕ್ಸರ್ಸ್ ಎರಡು ಸಂಖ್ಯೆ ಲಾರಿಗಳು ನಾಲ್ಕು ಸಂಖ್ಯೆ ಮೆಕ್ಯಾನಿಕಲ್ ವೈಬ್ರೇಟರ್ ಎರಡು ಸಂಖ್ಯೆ: ಸೆಂಟ್ರಿಂಗ್ ಸಾಮಗ್ರಿಗಳು ಹಾಗೂ ಇತರೆ ಅಗತ್ಯ ಯಂತ್ರೋಪಕರಣಗಳನ್ನು ಹೊಂದಿದ್ದು ಕಟ್ಟಡ ಕೆಲಸದಲ್ಲಿ ಅನುಭವ ಹೊಂದಿರಬೇಕು, ಮತ್ತು ಟೆಂಡರಿಗಿಟ್ಟಿರುವ ಮೊತ್ತದಲ್ಲಿ ಶೇಕಡ 30 ಭಾಗದ ಮೊತ್ತದ ಕಟ್ಟಡದ ಕೆಲಸಗಳನ್ನು ಕಳೆದ ಸಾಲಿನಲ್ಲಿ ಕೈಗೊಂಡು ಪೂರೈಸಿರಬೇಕು. ಕಾಮಗಾರಿಗೆ ನಿಗದಿಪಡಿಸಿದ ಮುಂಗಡ ಠೇವಣಿಯನ್ನು ಕರ್ನಾಟಕ ಸರ್ಕಾರದ ಟ್ರೆಜರಿ ಚಲನ್ ಕಾರ್ಯನಿರ್ವಾಹಕ ಇಂಜಿನಿಯರ್‌ರವರ ಹೆಸರಿಗೆ ಜಮಾ ಮಾಡಬಹುದಾದಂತೆ ಡಿಮ್ಯಾಂಡ್ ಡ್ರಾಫ್ಟ್ ಕಾರ್ಯಪಾಲಕ ಇಂಜಿನಿಯರ್‌ರವರ ಹೆಸರಿನಲ್ಲಿ ಒತ್ತೆ ಇಟ್ಟಿರುವ ಕಾಲಾವಧಿ ಠೇವಣಿಗಳು, (ರಾಷ್ಟ್ರೀಕೃತ ಬ್ಯಾಂಕುಗಳಿಗೆ ಸಂಬಂಧಪಟ್ಟಿರುವವುಗಳು ಮಾತ್ರ) ರಾಷ್ಟ್ರೀಯ ಉಳಿತಾಯ ಪತ್ರಗಳು ಮತ್ತು ಬ್ಯಾಂಕ್ ಗ್ಯಾರಂಟಿಯ ರೂಪದಲ್ಲಿ ಭರ್ತಿ ಮಾಡಿದ ಟೆಂಡರ್‌ನೊಂದಿಗೆ ದಿನಾಂಕ:19.01.2004 ರಂದು ಸಂಜೆ 4.00 ಗಂಟೆಯೊಳಗಾಗಿ ತುಮಕೂರು ಲೋಕೋಪಯೋಗಿ ಇಲಾಖಾ ವಿಭಾಗ ಕಛೇರಿಯಲ್ಲಾಗಲೀ ಅಥವಾ ಲೋಕೋಪಯೋಗಿ ಇಲಾಖೆ ಬೆಂಗಳೂರು ವೃತ್ತ ಅಧೀಕ್ಷಕ ಇಂಜಿನಿಯರ್‌ರವರ ಕಛೇರಿಯಲ್ಲಾಗಲೀ ಅಥವಾ ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡಗಳು(ದ), ಬೆಂಗಳೂರು ರವರ ಕಛೇರಿಯಲ್ಲಾಗಲೀ ಸ್ವೀಕರಿಸಲಾಗುವುದು. ನಿಬಂಧನೆಗಳಿಗೊಳಪಟ್ಟು ಅಥವಾ ಮೇಲಿನ ಯಾವುದೇ ಷರತ್ತುಗಳನ್ನು ಪೂರ್ಣಗೊಳಿಸದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

ಮೇಲೆ ನಿಗದಿಪಡಿಸಿರುವ ಯಾವುದೇ ದಿನಾಂಕಗಳಂದು ಸರ್ಕಾರ ರಜಾ ದಿನಗಳೆಂದು ಘೋಷಿಸಲ್ಪಟ್ಟಲ್ಲಿ ಮುಂದಿನ ಕೆಲಸದ ದಿನಗಳನ್ನು ಪರಿಗಣಿಸಲಾಗುವುದು. ಗುತ್ತಿಗೆದಾರರು ಮನವಿ ಪತ್ರದ ಜೊತೆಯಲ್ಲಿ ಗೆಜೆಟೆಡ್ ಅಧಿಕಾರಿಗಳಿಂದ ದೃಢೀಕರಿಸಲ್ಪಟ್ಟ ನೊಂದಣಿ ಪತ್ರವನ್ನು ಲಗತ್ತಿಸಬೇಕು.

| ಕ್ರ. ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ಲಕ್ಷ ರೂ. ಗಳಲ್ಲಿ) | ಟೆಂಡರ್‌ಗಿಡುವ ಸರಿಸುಮಾರು ಮೊಬಲಗು (ಲಕ್ಷ ರೂಗಳಲ್ಲಿ) | ಸಲ್ಲಿಸಬೇಕಾದ ಠೇವಣಿ ಹಣ | ಕಾಮಗಾರಿ ಪೂರ್ಣಗೊಳಿಸ ಬೇಕಾದ ಕಾಲಾವಧಿ ಮಳೆಗಾಲ ಸೇರಿ | ಅರ್ಹ ದರ್ಜೆ ಗುತ್ತಿಗೆದಾರರು | ಟೆಂಡರ್ ಫಾರಂ ಬೆಲೆ + ತೆರಿಗೆ (ಫಾರಂ ಬೆಲೆ ಹಿಂದಿರುಗಿಸಲಾ ಗುವುದಿಲ್ಲ) |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ತುಮಕೂರು ನಗರದ ಸಿದ್ಧಿವಿನಾಯಕ ತರಕಾರಿ ಮಾರುಕಟ್ಟೆಯ ಪುನರ್ ನಿರ್ಮಾಣ ಕಾಮಗಾರಿ | 240.00 | 216.80 | 216800 | 15 ತಿಂಗಳು | 1ನೇ ದರ್ಜೆ | 22000+ತೆರಿಗೆಗಳು |

**ಟೆಂಡರು ದಾಸ್ತಾವೇಜು ಸಲ್ಲಿಕೆಗೆ ನಿಗದಿಪಡಿಸಿರುವ ದಿನಾಂಕಗಳು**

1. ಖಾಲಿ ಟೆಂಡರ್ ಫಾರಂಗೆ ಮನವಿಯನ್ನು ಸಲ್ಲಿಸುವ ಕೊನೆಯ ದಿನಾಂಕ: 12.01.2004ರ ಸಂಜೆ 5.00 ಗಂಟೆವರೆಗೆ.
2. ಖಾಲಿ ಟೆಂಡರ್ ಫಾರಂಗಳನ್ನು ಗುತ್ತಿಗೆದಾರರಿಗೆ ನೀಡಲು ಕೊನೆಯ ದಿನಾಂಕ:14.01.2004ರ ಸಂಜೆ 5.00 ಗಂಟೆಯವರೆಗೆ.
3. ತಾಂತ್ರಿಕ ಮತ್ತು ಆರ್ಥಿಕ ಬಿಡ್‌ಗಳನ್ನು ಕಛೇರಿಗೆ ಸಲ್ಲಿಸಲು ಕೊನೆಯ ದಿನಾಂಕ:19.01.2004ರ ಸಂಜೆ 4.00 ಗಂಟೆಯವರೆಗೆ.
4. ತಾಂತ್ರಿಕ ಬಿಡ್‌ಗಳನ್ನು ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿಯಲ್ಲಿ ತೆರೆಯುವ ದಿನಾಂಕ: 19.01.2004ರ ಸಂಜೆ 5.00 ಗಂಟೆಗೆ ಅಥವಾ ಮುಂದಿನ ಸೂಕ್ತವಾದ ದಿನಾಂಕದಂದು ತೆರೆಯಲಾಗುವುದು.

## "ವಿಶೇಷ ಸೂಚನೆಗಳು"

1. ಯಾವ ಕಾರಣವನ್ನೂ ಸಹಾ ನೀಡದೇ ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ನಿರಾಕರಿಸುವ ಅಧಿಕಾರವನ್ನು ಟೆಂಡರ್ ಸ್ವೀಕರಿಸುವ ಅಧಿಕಾರಿಯವರು ಕಾದಿರಿಸಿಕೊಂಡಿರುತ್ತಾರೆ.
2. ಮೇಲೆ ನಮೂದಿಸಿರುವ ಷರತ್ತುಗಳಿಗನುಗುಣವಾಗಿ ಮುಂಗಡ ಠೇವಣಿ ಸಲ್ಲಿಸದೇ ಇರುವ ಟೆಂಡರ್‌ಗಳನ್ನು ನೇರವಾಗಿ ತಿರಸ್ಕರಿಸಲಾಗುವುದು.
3. ಖಾಲಿ ಟೆಂಡರ್ ಫಾರಂಗಳಿಗಾಗಿ ಮನವಿಯನ್ನು ಸಲ್ಲಿಸುವಾಗ ಅರ್ಹ ದರ್ಜೆಯಲ್ಲಿ ನೊಂದಾಯಿತರಾಗಿರುವ ಬಗ್ಗೆ ಪ್ರಮಾಣ ಪತ್ರ ಮತ್ತು ಗುತ್ತಿಗೆದಾರರ ದಾಖಲಾತಿ ಪುಸ್ತಕ (ಪಾಸ್ ಬುಕ್)ಗಳನ್ನು ಸಲ್ಲಿಸಿ ದಾಖಲಾತಿ ಮಾಡಿಸಿಕೊಳ್ಳಬೇಕು.
4. ಅರ್ಜಿ ಸಲ್ಲಿಸುವಾಗ ಅವರು ನಿರ್ವಹಿಸುತ್ತಿರುವ ಕಾಮಗಾರಿಗಳ ಪಟ್ಟಿಗಳನ್ನು ಮತ್ತು ಪೂರ್ಣಗೊಳಿಸಿದ ಕಾಮಗಾರಿಗಳ ಬಗ್ಗೆ ಪ್ರಮಾಣ ಪತ್ರವನ್ನು ಲಗತ್ತಿಸಬೇಕು. ಇಲ್ಲವಾದಲ್ಲಿ ಅರ್ಜಿಯನ್ನು ನೇರವಾಗಿ ತಿರಸ್ಕರಿಸಲಾಗುವುದು.
5. ಗುತ್ತಿಗೆದಾರರೇ ಸ್ವತಃ ಸಿಮೆಂಟ್, ಉಕ್ಕು, ಡಾಂಬರ್ ಮುಂತಾದವುಗಳನ್ನು ಒದಗಿಸಿಕೊಂಡು ಇಲಾಖಾ ನಿಯಮಾವಳಿಗಳ ಪ್ರಕಾರ ಕೆಲಸವನ್ನು ಪೂರ್ಣಗೊಳಿಸಬೇಕು ಮತ್ತು ಗುತ್ತಿಗೆದಾರರು ಸಾಮಗ್ರಿಗಳನ್ನು ಸ್ವಂತ ಖರ್ಚಿನಲ್ಲಿ ತಂದು ಗುಣಮಟ್ಟದ ಬಗ್ಗೆ ದೃಢೀಕರಿಸಿದ ನಂತರ ಉಪಯೋಗಿಸತಕ್ಕದ್ದು.
6. ಟೆಂಡರ್ ಫಾರಂಗಳನ್ನು ಪಡೆಯುವ ಸಂದರ್ಭದಲ್ಲಿ ಮತ್ತು ಟೆಂಡರ್ ಸಲ್ಲಿಸುವ ಸಮಯದಲ್ಲಿ ಪಾಸ್ ಬುಕ್‌ನಲ್ಲಿ ರೆಕಾರ್ಡ್ ಮಾಡಿಸಿಕೊಳ್ಳತಕ್ಕದ್ದು.
7. ಮೇಲಿನ ಕಾಮಗಾರಿಗೆ ಅರ್ಜಿ ಸಲ್ಲಿಸುವ ಗುತ್ತಿಗೆದಾರರು, ಅದೇ ರೀತಿಯ ಕಾಮಗಾರಿಯನ್ನು (ಎ) ಕಾಮಗಾರಿಗೆ ನಿಗದಿಪಡಿಸಿದ ಮೊತ್ತದಲ್ಲಿ ಶೇಕಡ 30ರಷ್ಟು ಮೊತ್ತಕ್ಕೆ ಹಿಂದಿನ ಆರ್ಥಿಕ ವರ್ಷದಲ್ಲಿ ಕೈಗೊಂಡು ಪೂರೈಸಿರಬೇಕು ಅಥವಾ (ಬಿ) ಹಿಂದಿನ ಐದು ವರ್ಷಗಳ ಕಾಲಾವಧಿಯಲ್ಲಿ ಕನಿಷ್ಠ ಶೇಕಡ 10 ರಂತೆ ಒಟ್ಟು ಕಾಮಗಾರಿಗೆ ನಿಗದಿಪಡಿಸಿರುವ ಮೊತ್ತದ ಶೇಕಡ 30ರಷ್ಟು ಮೊತ್ತದ ಕೆಲಸವನ್ನು ಕೈಗೊಂಡು ತೃಪ್ತಿಕರವಾಗಿ ಪೂರೈಸಿರಬೇಕು. ಇದಕ್ಕೆ ಸಂಬಂಧಿಸಿದಂತೆ ಸಕ್ಷಮ ಅಧಿಕಾರಿಗಳ ದೃಢೀಕರಣ ಪತ್ರವನ್ನು ಅರ್ಜಿ ಸಲ್ಲಿಸುವ ಸಂದರ್ಭದಲ್ಲೇ ಒದಗಿಸಬೇಕು.
8. ಗುತ್ತಿಗೆದಾರರು ಈ ಹಿಂದೆ ಯಾವುದೇ ಕೆಲಸಗಳನ್ನು ಪೂರ್ಣಗೊಳಿಸದೆ ಮಧ್ಯದಲ್ಲಿ ತೊರೆದಿರಬಾರದು, ಹಾಗೂ ಸಕಾರಣವಿಲ್ಲದೆ ಯಾವುದೇ ಕಾಮಗಾರಿಯನ್ನು ವಿಳಂಬವಾಗಿ ಪೂರೈಸಿರಬಾರದು. ಇಂತಹ ಗುತ್ತಿಗೆದಾರರ ಅರ್ಜಿಗಳನ್ನು ನೇರವಾಗಿ ತಿರಸ್ಕರಿಸಲಾಗುವುದು. ಒಂದು ವೇಳೆ ಗುತ್ತಿಗೆ ಅವಧಿ ಪೂರ್ಣಗೊಂಡಿದ್ದರೂ ಕಾಮಗಾರಿ ಪೂರ್ಣಗೊಳಿಸದಿದ್ದಲ್ಲಿ, ಕುಂಠಿತವಾಗಿದ್ದಲ್ಲಿ ಅಂತಹ ಗುತ್ತಿಗೆದಾರರ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
9. ಮೇಲಿನ ಕೆಲಸಗಳಿಗೆ ಬೇಕಾದ ಅಗತ್ಯವಾದ ಕಾಂಕ್ರೀಟ್ ಮಿಕ್ಸರ್, ವೈಬ್ರೇಟರ್, ಸೆಂಟ್ರಿಂಗ್ ಸಾಮಗ್ರಿಗಳು, ಲಾರಿಗಳು ಹಾಗೂ ಇತರೆ ಅವಶ್ಯಕ ಯಂತ್ರೋಪಕರಣಗಳನ್ನು ಸ್ವಂತವಾಗಿ ಹೊಂದಿರತಕ್ಕದ್ದು ಅಥವಾ ಹೊಂದಿಸಿಕೊಂಡು ಕೆಲಸ ನಿರ್ವಹಿಸುವ ಬಗ್ಗೆ ದಾಖಲಾತಿ ಅರ್ಜಿ ಸಲ್ಲಿಸುವ ಸಮಯದಲ್ಲೇ ಒದಗಿಸತಕ್ಕದ್ದು. ಇಲ್ಲವಾದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
10. ಗುತ್ತಿಗೆದಾರರು ಮೂರು ವರ್ಷದವರೆವಿಗೆ ಪೂರೈಸಿದ ಕಾಮಗಾರಿಯ ನಿರ್ವಹಣೆಯನ್ನು ಮಾಡತಕ್ಕದ್ದು.
11. ಗುತ್ತಿಗೆದಾರರು ಟೆಂಡರ್ ಸಲ್ಲಿಸುವಾಗ ಲಕೋಟೆ ಮೇಲೆ ಮತ್ತು 'ಬಿ' ಷೆಡ್ಯೂಲ್‌ನಲ್ಲಿ ತಮ್ಮ ಪೂರ್ಣ ವಿಳಾಸವನ್ನು ನಮೂದಿಸಬೇಕು. ಇಲ್ಲವಾದಲ್ಲಿ ನೇರವಾಗಿ ತಿರಸ್ಕರಿಸಲಾಗುವುದು.
12. ಗುತ್ತಿಗೆದಾರರು ಟೆಂಡರ್ ಸಲ್ಲಿಸುವಾಗ 'ಬಿ' ಷೆಡ್ಯೂಲ್‌ನಲ್ಲಿ ದರಗಳನ್ನು ನಮೂದಿಸುವಾಗ ಸ್ಪಷ್ಟವಾಗಿ ಒಂದೇ ರೀತಿಯ ಬರವಣಿಗೆಯಲ್ಲಿ ಪ್ರತೀ ಪುಟಕ್ಕೂ ಸಹಿಯೊಂದಿಗೆ ಯಾವುದೇ ರೀತಿಯ ವ್ಯತ್ಯಾಸವಾಗದಂತೆ ನಮೂದಿಸಬೇಕು. ಇಲ್ಲವಾದಲ್ಲಿ ಟೆಂಡರ್‌ಗಳನ್ನು ಪರಿಗಣಿಸಲಾಗುವುದಿಲ್ಲ.
13. ಟೆಂಡರ್‌ದಾರರು ಜಂಟಿಯಾಗಿ (ಇನ್ನೋರ್ವ ಗುತ್ತಿಗೆದಾರರೊಂದಿಗೆ) ಭಾಗವಹಿಸಲು ಅವಕಾಶವಿಲ್ಲ.

ಕಾರ್ಯನಿರ್ವಾಹಕ ಇಂಜಿನಿಯರ್,
ಲೋಕೋಪಯೋಗಿ ಇಲಾಖೆ ವಿಭಾಗ, ತುಮಕೂರು.

ಪಿ.ಆರ್.783

## ತೋಟಗಾರಿಕೆ ಇಲಾಖೆ

## ತೋಟಗಾರಿಕೆ ನಿರ್ದೇಶನಾಲಯ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಪಿ.ಓ.ಬಾಕ್ಸ್ ನಂ.7648, ಬೆಂಗಳೂರು

## ಟೆಂಡರ್ ಪ್ರಕಟಣೆ

**ಸಂಖ್ಯೆ:ತೋಇ:ಜೀವತಾ:ಹಿಸತೋನಿ:ಅಂಕೃ:ಸತೋಅ1:58:2003-2004, ಬೆಂಗಳೂರು, ದಿನಾಂಕ:17ನೇ ನವಂಬರ್, 2003**

ಬಯೋಟೆಕ್ನಾಲಜಿ ಕೇಂದ್ರ ಹುಳಿಮಾವು, ಬೆಂಗಳೂರು-76 ಇಲ್ಲಿನ ಅಂಗಾಂಶ ಕೃಷಿ ಪ್ರಯೋಗಶಾಲೆಯ ಸಸ್ಯಾಭಿವೃದ್ಧಿಗಾಗಿ 2003-04ನೇ ಸಾಲಿನಲ್ಲಿ ಅಗತ್ಯವಿರುವ ವೆಂಟಿಲೇಟೆಡ್ ಹಸಿರುಮನೆ ನಿರ್ಮಾಣ, ನೆರಳು ಪರದೆ ಪೆಂಡಾಲಿನ ನಿರ್ಮಾಣ, ಹಾಲಿ ಇರುವ ಕೂಲ್ ಪ್ಯಾಡ್ ಹಸಿರು ಮನೆಯಲ್ಲಿ ಅಂಗಾಂಶ ಕೃಷಿ ಸಸಿಗಳನ್ನು ಜೋಡಿಸಲು ಅಗತ್ಯವಿರುವ ಗ್ಯಾಲ್ವನೈಸ್ಡ್ ಬೆಂಚುಗಳ ನಿರ್ಮಾಣ, ಅಂಗಾಂಶ ಕೃಷಿ ಪ್ರಯೋಗಶಾಲೆಯ ಮಿಲ್ಲಿಪೋರ್ ನೀರಿನ ಶುದ್ಧೀಕರಣ ಯಂತ್ರದ ಕಾರ್ಟ್ರಿಡ್ಜ್‌ಗಳು, ಗುಣಮಟ್ಟ ನಿಯಂತ್ರಣ ಪ್ರಯೋಗಶಾಲೆಗೆ ಅಗತ್ಯವಿರುವ ಶೇಕಿಂಗ್ ಇನ್‌ಕ್ಯುಬೇಟರ್, ಗುತ್ತಿಗೆ ಆಧಾರದ ಮೇಲೆ ಕೀಟನಾಶಕಗಳ ಉಳಿಕೆ ವಿಶ್ಲೇಷಣೆ, ಸುಗಂಧ ದ್ರವ್ಯಗಳ ವಿಶ್ಲೇಷಣೆ, ಔಷಧೀಯ ಸಸ್ಯಗಳಲ್ಲಿರುವ ಆಕ್ಟೀವ್ ಪ್ರಿನ್ಸಿಪಲ್ ವಿಶ್ಲೇಷಣೆ ಹಾಗೂ ಸಾಂಪ್ರದಾಯಿಕ ತೋಟಗಾರಿಕೆ ಬೆಳೆಗಳನ್ನು ಗುರುತಿಸಿ ದಾಖಲಾತಿ ಮಾಡಿಕೊಡುವ ಬಗ್ಗೆ ಅನುಭವವಿರುವ ಸಂಸ್ಥೆಗಳು, ಹಾಗೂ ಸರಬರಾಜುದಾರರಿಂದ ಮೊಹರಾದ ಟೆಂಡರುಗಳನ್ನು ಆಹ್ವಾನಿಸಲಾಗಿದೆ. ಸದರಿ ಕಾಮಗಾರಿಗಳನ್ನು ಕೈಗೊಳ್ಳುವ ಬಗ್ಗೆ, ದಾಖಲಾತಿ ಮಾಡುವ ಬಗ್ಗೆ ಹಾಗೂ ಸಾಮಗ್ರಿಗಳ ಸರಬರಾಜಿನ ಬಗ್ಗೆ ತಗಲುವ ವೆಚ್ಚವನ್ನು ಪ್ರತ್ಯೇಕ ಟೆಂಡರುಗಳಲ್ಲಿ ನಮೂದಿಸಬೇಕು. ಟೆಂಡರ್ ಫಾರಂಗಳು, ನಿಬಂಧನೆಗಳು ಮತ್ತು ಇತರೆ ಮಾಹಿತಿಗಳನ್ನು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಅಂಗಾಂಶ ಕೃಷಿ ಪ್ರಯೋಗಶಾಲೆ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು-76 ರವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ದಿನಾಂಕ:10.12.2003 ರಿಂದ 20.12.2003ರ ಒಳಗೆ ಪಡೆಯಬಹುದು.

ಟೆಂಡರ್ ಫಾರಂನ ಮೊತ್ತ ರೂ. 25/-. ಮೊಹರಾದ ವೆಂಟಿಲೇಟೆಡ್ ಹಸಿರುಮನೆ ನಿರ್ಮಾಣ, ನೆರಳು ಪರದೆ ಪೆಂಡಾಲಿನ ನಿರ್ಮಾಣ, ಹಾಲಿ ಇರುವ ಕೂಲ್ ಪ್ಯಾಡ್ ಹಸಿರು ಮನೆಯಲ್ಲಿ ಅಂಗಾಂಶ ಕೃಷಿ ಸಸಿಗಳನ್ನು ಜೋಡಿಸಲು ಅಗತ್ಯವಿರುವ ಗ್ಯಾಲ್ವನೈಸ್ಡ್ ಬೆಂಚುಗಳ ನಿರ್ಮಾಣ, ಅಂಗಾಂಶ ಕೃಷಿ ಪ್ರಯೋಗಶಾಲೆಯ ನೀರಿನ ಶುದ್ಧೀಕರಣ ಯಂತ್ರದ ಕಾರ್ಟ್ರಿಡ್ಜ್‌ಗಳು, ಗುಣಮಟ್ಟ ನಿಯಂತ್ರಣ ಪ್ರಯೋಗಶಾಲೆಗೆ ಅಗತ್ಯವಿರುವ ಶೇಕಿಂಗ್ ಇನ್‌ಕ್ಯುಬೇಟರ್, ಗುತ್ತಿಗೆ ಆಧಾರದ ಮೇಲೆ ಕೀಟನಾಶಕಗಳ ಉಳಿಕೆ ವಿಶ್ಲೇಷಣೆ, ಸುಗಂಧ ದ್ರವ್ಯಗಳ ವಿಶ್ಲೇಷಣೆ, ಔಷಧೀಯ ಸಸ್ಯಗಳಲ್ಲಿರುವ ಆಕ್ಟೀವ್ ಪ್ರಿನ್ಸಿಪಲ್ ವಿಶ್ಲೇಷಣೆ ಹಾಗೂ ಸಾಂಪ್ರದಾಯಿಕ ತೋಟಗಾರಿಕೆ ಬೆಳೆಗಳನ್ನು ಗುರುತಿಸಿ ದಾಖಲಾತಿ ಮಾಡುವ ಬಗ್ಗೆ ಟೆಂಡರು ಎಂದು ಪ್ರತ್ಯೇಕವಾಗಿ ನಮೂದಿಸಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಅಂಗಾಂಶ ಕೃಷಿ ಪ್ರಯೋಗಶಾಲೆ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು-76 ರವರಿಗೆ ದಿನಾಂಕ: 22.12.2003 ರ 2.00 ಘಂಟೆಯ ಒಳಗೆ ಅಂಚೆ ಅಥವಾ ಮುದ್ದಾಂ ಕಳುಹಿಸುವುದು. ಟೆಂಡರುಗಳನ್ನು ಅದೇ ದಿನ ಸಂಜೆ 4.00 ಘಂಟೆಗೆ ತೆರೆಯಲಾಗುವುದು.

ತೋಟಗಾರಿಕೆ ನಿರ್ದೇಶಕರು.

### 2003-04ನೇ ಸಾಲಿನಲ್ಲಿ ಬಯೋಟೆಕ್ನಾಲಜಿ ಕೇಂದ್ರದ ಆವರಣದಲ್ಲಿ ಕೈಗೊಳ್ಳಬೇಕಾಗಿರುವ ಕಾಮಗಾರಿಗಳ ವಿವರ

- ವೆಂಟಿಲೇಟೆಡ್ ಹಸಿರು ಮನೆ ನಿರ್ಮಾಣ
- ನೆರಳು ಪರದೆ ಪೆಂಡಾಲಿನ ನಿರ್ಮಾಣ
- ಹಾಲಿ ಇರುವ ಹಸಿರು ಮನೆಯಲ್ಲಿ ಗ್ಯಾಲ್ವನೈಸ್ಡ್ ಬೆಂಚುಗಳ ನಿರ್ಮಾಣ
- ಅಂಗಾಂಶ ಕೃಷಿ ಪ್ರಯೋಗಶಾಲೆಯಲ್ಲಿ ನೀರಿನ ಶುದ್ಧೀಕರಣಕ್ಕಾಗಿ ಅಳವಡಿಸಿರುವ ಮಿಲ್ಲಿಪೋರ್ ನೀರಿನ ಶುದ್ಧೀಕರಣ ಯಂತ್ರದ ಕಾರ್ಟ್ರಿಡ್ಜ್ ಖರೀದಿಸುವ ಬಗ್ಗೆ.
- ಗುಣಮಟ್ಟ ನಿಯಂತ್ರಣ ಪ್ರಯೋಗಶಾಲೆಗೆ ಅಗತ್ಯವಿರುವ ಶೇಕಿಂಗ್ ಇನ್‌ಕ್ಯುಬೇಟರ್.
- ಗುತ್ತಿಗೆ ಆಧಾರದ ಮೇಲೆ ಕೀಟನಾಶಕಗಳ ಉಳಿಕೆ ವಿಶ್ಲೇಷಣೆ, ಸುಗಂಧ ದ್ರವ್ಯಗಳ ವಿಶ್ಲೇಷಣೆ, ಔಷಧೀಯ ಸಸ್ಯಗಳಲ್ಲಿರುವ ಆಕ್ಟೀವ್ ಪ್ರಿನ್ಸಿಪಲ್ ವಿಶ್ಲೇಷಣೆ ಕೈಗೊಳ್ಳುವ ಬಗ್ಗೆ.
- ಸಾಂಪ್ರದಾಯಿಕ ತೋಟಗಾರಿಕೆ ಬೆಳೆಗಳನ್ನು ಗುರುತಿಸಿ ದಾಖಲಾತಿ ಮಾಡುವ ಬಗ್ಗೆ ಯೋಜನೆ.

ತೋಟಗಾರಿಕೆ ನಿರ್ದೇಶಕರು.

### ಟೆಂಡರ್ ನಿಯಮಾವಳಿಗಳು

1. ಟೆಂಡರ್ ಫಾರಂ ಬೆಲೆ ರೂ. 25/- ಮಾತ್ರ. ಟೆಂಡರ್ ಫಾರಂನ್ನು ಈ ಕಛೇರಿಯಲ್ಲಿ ಹಣ ನೀಡಿ ಪಡೆಯಬಹುದು. ಟೆಂಡರ್ ಫಾರಂ ಹಣ ಹಿಂತಿರುಗಿಸಲಾಗುವುದಿಲ್ಲ.
2. ಟೆಂಡರ್ ಫಾರಂನ್ನು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಅಂಗಾಂಶ ಕೃಷಿ ಪ್ರಯೋಗಶಾಲೆ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು-76 ರವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದು. ವಿ.ಪಿ.ಪಿ. ಮುಖಾಂತರ ಕಳುಹಿಸಿಕೊಡಲಾಗುವುದಿಲ್ಲ.
3. ಟೆಂಡರ್ ಫಾರಂನ್ನು ದಿನಾಂಕ: 10.12.2003 ರಿಂದ 20.12.2003 ಸಂಜೆ 5.00ರ ವರೆಗೆ ಮಾತ್ರ ನೀಡಲಾಗುವುದು. ಮೊಹರು ಮಾಡಿದ ಟೆಂಡರನ್ನು ವಾಪಸ್ಸು ನೀಡಲು ಅಂತಿಮ ದಿನಾಂಕ:22.12.2003 ಮಧ್ಯಾಹ್ನ 2.00 ಗಂಟೆಯವರೆಗೆ ಮಾತ್ರ.
4. ಟೆಂಡರನ್ನು ದಿನಾಂಕ: 22.12.2003ರಂದು ಸಂಜೆ 4.00 ಘಂಟೆಗೆ ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು ಇಲ್ಲಿ ತೆರೆಯಲಾಗುವುದು.

5. ಸದರಿ ಟೆಂಡರಿನಲ್ಲಿ ಪ್ರಕಟಿಸಿರುವ ವೆಂಟಿಲೇಟೆಡ್ ಹಸಿರುಮನೆ ನಿರ್ಮಾಣ, ನೆರಳು ಪರದೆ ಪೆಂಡಾಲಿನ ನಿರ್ಮಾಣ, ಹಾಲಿ ಇರುವ ಕೂಲ್ ಪ್ಯಾಡ್ ಹಸಿರು ಮನೆಯಲ್ಲಿ ಅಂಗಾಂಶ ಕೃಷಿ ಸಸಿಗಳನ್ನು ಜೋಡಿಸಲು ಅಗತ್ಯವಿರುವ ಗ್ಯಾಲ್ವನೈಸ್ಡ್ ಬೆಂಚುಗಳ ನಿರ್ಮಾಣ, ಅಂಗಾಂಶ ಕೃಷಿ ಪ್ರಯೋಗಶಾಲೆಯ ನೀರಿನ ಶುದ್ಧೀಕರಣ ಯಂತ್ರದ ಕಾರ್ಟ್ರಿಡ್ಜ್‌ಗಳು, ಗುಣಮಟ್ಟ ನಿಯಂತ್ರಣ ಪ್ರಯೋಗಶಾಲೆಗೆ ಅಗತ್ಯವಿರುವ ಶೇಕಿಂಗ್ ಇನ್‌ಕ್ಯುಬೇಟರ್, ಗುತ್ತಿಗೆ ಆಧಾರದ ಮೇಲೆ ಕೀಟನಾಶಕಗಳ ಉಳಿಕೆ ವಿಶ್ಲೇಷಣೆ, ಸುಗಂಧ ದ್ರವ್ಯಗಳ ವಿಶ್ಲೇಷಣೆ, ಔಷಧೀಯ ಸಸ್ಯಗಳಲ್ಲಿರುವ ಆಕ್ಟೀವ್ ಪ್ರಿನ್ಸಿಪಲ್ ವಿಶ್ಲೇಷಣೆ ಹಾಗೂ ಸಾಂಪ್ರದಾಯಿಕ ತೋಟಗಾರಿಕೆ ಬೆಳೆಗಳನ್ನು ಗುರುತಿಸಿ ದಾಖಲಾತಿ ಮಾಡುವ ಯೋಜನೆ ಬಗ್ಗೆ ತಾಂತ್ರಿಕ ವಿವರಣೆಗಳನ್ನು ಹಾಗೂ ಸರಬರಾಜು ನಿಬಂಧನೆಗಳ ಪೂರ್ಣ ವಿವರಣೆಗಳನ್ನು ಸದರಿ ಕಛೇರಿಯಲ್ಲಿ ಪಡೆಯಬಹುದು.

6. ತೆರಿಗೆ ಮತ್ತು ಅಬ್ಕಾರಿ ಶುಲ್ಕವನ್ನು ಸ್ಪಷ್ಟವಾಗಿ ನಮೂದಿಸುವುದು. ಪ್ಯಾಕಿಂಗ್ ಚಾರ್ಜ್, ಸಾಗಾಣಿಕೆ ವೆಚ್ಚ, ವಿಮೆ ಎಲ್ಲವನ್ನು ಸೇರಿಸಿ ಐಟಂವಾರು ತಗಲುವ ಕನಿಷ್ಟ ದರವನ್ನು ಪ್ರತ್ಯೇಕವಾಗಿ ನಮೂದಿಸುವುದು.

7. ಟೆಂಡರುದಾರರು ನಮೂದಿಸುವ ಕೆಲಸಗಳ/ಸಾಮಗ್ರಿಗಳ ಒಟ್ಟು ಮೊತ್ತದ ಶೇ. 2ರಷ್ಟು ಮೊತ್ತದ ಇ.ಎಂ.ಡಿ. ಮೊಬಲಗನ್ನು ಹಾಗೂ ಗುತ್ತಿಗೆ ಆಧಾರದ ಮೇಲೆ ವಿಶ್ಲೇಷಣಾ ಕೆಲಸಗಳನ್ನು ನಿರ್ವಹಿಸುವ ಬಗ್ಗೆ ಹಾಗೂ ಸಾಂಪ್ರದಾಯಿಕ ತೋಟಗಾರಿಕೆ ಬೆಳೆಗಳನ್ನು ಗುರುತಿಸಿ ದಾಖಲಾತಿ ಮಾಡುವ ಯೋಜನೆ ಬಗ್ಗೆ ರೂ. 5,000/- ಮೊತ್ತವನ್ನು ಹುಂಡಿಯ ಮುಖಾಂತರ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಅಂಗಾಂಶ ಕೃಷಿ ಪ್ರಯೋಗಶಾಲೆ, ಬೆಂಗಳೂರುರವರ ಹೆಸರಿನಲ್ಲಿ ಟೆಂಡರ್ ಅರ್ಜಿಯೊಂದಿಗೆ ಸಲ್ಲಿಸಬೇಕು.

8. ಟೆಂಡರ್ ಅನುಮೋದಿತ ಸಂಸ್ಥೆಯು ಶೇ. 5ರಷ್ಟು ಮೊತ್ತದ ಇ.ಎಂ.ಡಿ. ಮೊಬಲಗನ್ನು ಸದರಿ ಅಧಿಕಾರಿಯವರ ಹೆಸರಿನಲ್ಲಿ ಖರೀದಿ ಆದೇಶ ನೀಡುವ ಮುನ್ನ ನೀಡಬೇಕು.

9. ಸಂಸ್ಥೆಯವರು ತಮ್ಮ ಆದಾಯ ತೀರುವಳಿ ದೃಢೀಕರಣ ಪತ್ರವನ್ನು (ಅಂತಿಮವಾಗಿ ಸಲ್ಲಿಸಿರುವ) ಟೆಂಡರ್ ಜೊತೆಯಲ್ಲಿ ಸಲ್ಲಿಸುವುದು.

10. ಯಾವುದೇ ಕಾರಣ ನೀಡದೇ ಟೆಂಡರ್ ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಕೆಳಸಹಿದಾರರಿಗೆ ಕಾಯ್ದಿರಿಸಲಾಗಿದೆ.

11. ಸಾಮಗ್ರಿಗಳ ಪೂರೈಕೆಯನ್ನು ಹಾಗೂ ಕಾಮಗಾರಿಗಳನ್ನು ಆದೇಶ ನೀಡಿದ 30 ದಿನಗಳಲ್ಲಿ ಸರಬರಾಜು/ಪೂರ್ಣಗೊಂಡ ನಂತರ ಮಾಡಿದ ನಂತರ, ಕಾರ್ಯಕ್ಷಮತೆ ಹಾಗೂ ಗುಣಮಟ್ಟದ ಬಗ್ಗೆ ತೃಪ್ತಿಯಾದ ಮೇಲೆ ಹಣ ಬಿಡುಗಡೆ ಮಾಡಲಾಗುವುದು.

12. ಸರ್ಕಾರದ ನಿಯಮಾವಳಿಗಳ ಪ್ರಕಾರ ಸಂಬಂಧಿಸಿದ ತೆರಿಗೆಗಳನ್ನು ಮೂಲ ಬಿಲ್ಲಿನಲ್ಲಿಯೇ ಕಟಾವು ಮಾಡಲಾಗುವುದು.

13. ಪಾಲಿಹೊದಿಕೆಯ ಹಸಿರುಮನೆ, ಗ್ಯಾಲ್ವನೈಸ್ಡ್ ಬೆಂಚುಗಳ ನಿರ್ಮಾಣ, ಹಾಗೂ ನೆರಳು ಪರದೆ ಪೆಂಡಾಲಿನ ನಿರ್ಮಾಣದ ಬಗ್ಗೆ ತಾಂತ್ರಿಕ ನಿಬಂಧನೆಗಳ ಪ್ರಕಾರ ಟೆಂಡರ್ ವಿವರಗಳನ್ನು ಸಲ್ಲಿಸಬೇಕು.

14. ಗುತ್ತಿಗೆ ಆಧಾರದ ಮೇಲೆ ವಿಶ್ಲೇಷಣಾ ಕೆಲಸಗಳನ್ನು ನಿರ್ವಹಿಸುವ ಬಗ್ಗೆ ಸಂಬಂಧಪಟ್ಟ ವಿಷಯದಲ್ಲಿ ತಜ್ಞರಿದ್ದು ಅನುಭವದ ಆಧಾರದ ಮೇಲೆ ಆದ್ಯತೆ ನೀಡಲಾಗುವುದು.

15. ಸಾಂಪ್ರದಾಯಿಕ ತೋಟಗಾರಿಕೆ ಬೆಳೆಗಳನ್ನು ಗುರುತಿಸಿ ದಾಖಲಾತಿ ಮಾಡುವ ಯೋಜನೆ ಬಗ್ಗೆ ಯಾವುದೇ ಸಂಸ್ಥೆಯು ಸದರಿ ಯೋಜನೆಯನ್ನು 2 ವರ್ಷ ಅವಧಿಯಲ್ಲಿ ಪೂರೈಸುವುದು, ಸಂಸ್ಥೆಯು ಜೀವ ವೈವಿಧ್ಯತೆಯ ಸಂರಕ್ಷಣಾ ಕ್ಷೇತ್ರದಲ್ಲಿ 5 ವರ್ಷದ ಅನುಭವ ಹೊಂದಿದ್ದು, ಇಂತಹ ಯೋಜನೆಗಳನ್ನು ಅನುಷ್ಠಾನಗೊಳಿಸಿರಬೇಕು. ಸಸ್ಯವಿಜ್ಞಾನದಲ್ಲಿ ಪರಿಣಿತಿ ಇರುವ ಸರ್ಕಾರಿ/ಸರ್ಕಾರೇತರ ಸಂಘಸಂಸ್ಥೆಗಳು ಮಾತ್ರ ಭಾಗವಹಿಸಲು ಅವಕಾಶವಿರುತ್ತದೆ. ಹಾಗೂ ತೋಟಗಾರಿಕೆ ಬೆಳೆಗಳನ್ನು ಹರ್ಬೇರಿಯಂನಲ್ಲಿ ಸಂಗ್ರಹಿಸುವ ಅನುಭವ ಹೊಂದಿರಬೇಕು.

ತೋಟಗಾರಿಕೆ ನಿರ್ದೇಶಕರು.

## DEPARTMENT OF HORTICULTURE

**Directorate of Horticulture, Biotechnology Centre, Hulimavu, PO Box No.7648, Bangalore.**

**TENDER NOTICE**

**No:DH:BIOTECH:SADH:TC:AHO1:58:2002-03, Bangalore, Dated:17th November, 2003**

Sealed tenders are invited for the Construction of ventilated green house, Shade net Pendal, Supply and fixing of hot dip galvanized benches in cooling fan and pad green house, Supply of cartridges for Millipore water purification system at Tissue Culture Laboratory, Shaking Incubator for Quality Control Laboratory, Analysis of Pesticide Residues, Essential Oil content, Medicinal Plants active principle on contract basis and undertaking the study on Identification and Documentation of Traditional Horticultural Crops during 2003-04 from companies, suppliers and Government/ non Governmental organizations/ institutions. The tender forms, terms and conditions, technical specifications and project specifications may be obtained from the office of the Senior Assistant Director of Horticulture (Tissue Culture), Biotechnology Centre, Hulimavu, Bangalore-76 during office hours from 10.12.2003 to 20.12.2003.

Application fee for each tender form is Rs. 25/-. The sealed tenders prescribed on the cover as "TENDER FOR THE CONSTRUCTION OF VENTILATED GREEN HOUSE, SHADE NET PENDAL, SUPPLY AND FIXING OF HOT DIP GALVANIZED BENCHES IN COOLING FAN AND PAD GREEN HOUSE, SUPPLY OF CARTRIDGES FOR MILLIPORE WATER PURIFICATION SYSTEM, SHAKING INCUBATOR FOR QUALITY CONTROL LABORATORY, ANALYSIS OF PESTICIDE RESIDUES, ESSENTIAL OIL CONTENT, MEDICINAL PLANTS ACTIVE PRINCIPLE ON CONTRACT BASIS AND STUDY ON IDENTIFICATION AND DOCUMENTATION OF TRADITIONAL HORTICULTURAL CROPS"

may be sent either through post or in person so as to reach Senior Assistant Director of Horticulture (Tissue Culture), Biotechnology Centre, Hulimavu, Bangalore-76 on or before 2 p.m. of 22/12/2003.

Tenders will be opened on the same day i.e., 22/12/2003 at 4.00 p.m. in the premises of Biotechnology Centre, Hulimavu, Bangalore-76.

DIRECTOR OF HORTICULTURE.

**DETAILS OF WORKS TO BE CARRIED OUT AND MATERIALS TO BE SUPPLIED DURING 2003-04**

- The Construction of Ventilated Poly House (Size: 16m x 32m-512Sq.m)
- Construction of Shadenet Pendal (Size: 80ft x 60ft)
- Supply & Fixing of Hot Dip Galvanised Tables (Benches) with mesh top inside polyhouse (Size: 4.5ft x 20ft x 3ft, mesh size:1" x 1")
- Polyamide reverse osmosis cartridge for Millipore Water Purification System (RO-15 System)
- Shaking Incubator for Quality Control Laboratory
- Analysis of Pesticide Residues, Essential Oil content, Medicinal Plants active principle on contract basis
- Study on Identification & Documentation of Traditional Horticultural Crops.

DIRECTOR OF HORTICULTURE.

**TERMS AND CONDITION OF THE TENDER**

1. The cost of the tender form is Rs. 25/- each (Non refundable). The tender should be submitted separately to each category.
2. Tender form can be obtained from 10.12.2003 to 20.12.2003 from the Office of the Senior Assistant Director of Horticulture (Tissue Culture), Biotechnology Centre, Hulimavu, Bangalore-76 during office hours.
3. Sealed tenders will be accepted till 2.00 p.m. of 22.12.2003. Tenders sent after 2.00 p.m. of that day will not be accepted. Tenders will be opened at 4.00 p.m. on the same day (22.12.2003) at Biotechnology Centre, Hulimavu, Bangalore-76.
4. Complete details of technical specifications, terms and conditions, and quality details can be obtained from the Office of the Senior Assistant Director of Horticulture (Tissue Culture), Biotechnology Centre, Hulimavu, Bangalore-76 along with the tender form.
5. EMD of 2% of the total quoted amount of the work carried out & for the item should be submitted through crossed Demand draft. Cheques and national saving certificates will not be accepted. For Carrying out analysis works on contract basis and study on Identification and Documentation of Traditional Horticultural Crops, the tenderer should submit Rs. 5000/- through crossed DD as security deposit.
6. Crossed Demand draft should be obtained from any Nationalized Banks in Bangalore in the name of the **Senior Assistant Director of Horticulture (Tissue Culture), Bangalore.**
7. Lowest Price for the above items must be quoted in the tender form.
8. The rates quoted should be inclusive of all taxes, freights, insurance, transport charges, handling and packing charges.
9. Technical tenders and financial tenders should be given in separate sealed envelopes and envelope should be subscribed as technical tender or financial tender as the case may be for the Construction of ventilated green house, Shade net Pendal, Supply and fixing of hot dip galvanized benches, Supply of cartridges for Millipore water purification system and study on Identification and Documentation on Traditional Horticultural Crops.
10. Successful tenderer should submit demand draft of 5% of the total price for the item quoted before giving the supply order in the name of the Senior Assistant Director of Horticulture (Tissue Culture), Bangalore.
11. The supplier shall ensure quality of the item for a minimum period of one year from the date of construction/ supply and ensure the true quality of the materials constructed/ supplied.
12. Director of Horticulture has the power to accept or reject the tenders without assigning any reasons.
13. Entire construction/ supply has to be completed as per the specifications given by the department and hand over in satisfactory working conditions with in one month from the date of receipt of supply/ work order.
14. The supplier shall enclose the income tax clearance certificate along with the tender.
15. As per the Government norms work contract tax (@ 4%) and Income tax (2.3%) will be deducted at source.
16. The acceptance of the above rules and regulations must be given in writing.
17. **Construction of Ventilated Greenhouse, Shade net pendal and Hot dip galvanized Benches inside the Greenhouse/ Supply of Shaking Incubator for quality control Laboratory** should be as per the technical specifications given by the department.

18. The company/ Agency should have constructed atleast 5 greenhouses & shadenet pendals (Necessary documents may be enclosed).
19. **Supply cartridges to Millipore water purification system:** the supplier must be the authorized dealer of that product.
20. **To carry out Analysis works on contract basis,** the tenderer must be specialized in the subject, preference will be given based on the experience.
21. **Study on Identification and Documentation of Traditional Horticultural Crops:** The project period will be for 2 years, the Organisation/ Institution should have minimum 5- years experience in the field of Plant Biodiversity. It should have the experience of preparation of Plant Herbarium & experience of handling such projects for a minimum period of 5 years.

**(Further details & specifications can be obtained from the office of the Senior Assistant Director of Horticulture (Tissue Culture), Biotechnology Centre, Hulimavu, Bangalore-76 during office hours)**

PR-801 DIRECTOR OF HORTICULTURE.

**ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್‌ರವರ ಕಛೇರಿ, ಬೆಂಗಳೂರು**

**ಟೆಂಡರ್ ಪ್ರಕಟಣೆ**

**ಸಂಖ್ಯೆ:33/ಆಯುಧ/2003-04, ದಿನಾಂಕ:7ನೇ ಡಿಸೆಂಬರ್, 2003**

ಪೊಲೀಸ್ ಇಲಾಖೆಗೆ ಬೇಕಾದ ಆಯುಧ ಸ್ವಚ್ಛತಾ ಸಾಮಗ್ರಿಗಳನ್ನು ಸರಬರಾಜು ಮಾಡಲು ಮೊಹರು ಮಾಡಿರುವ ದರಪಟ್ಟಿಗಳ ಜೊತೆಯಲ್ಲಿ ಮಾದರಿಯ 3 ಸಾಮಗ್ರಿಗಳನ್ನು ಆಹ್ವಾನಿಸಲಾಗಿದೆ.

| ಕ್ರ. ಸಂ. | ಸಾಮಗ್ರಿಯ ಹೆಸರು | ಖರೀದಿಸುವ ವಸ್ತುಗಳ ಅಂದಾಜು ಪ್ರಮಾಣ |
|---|---|---|
| 1. | ಪ್ಲಾನೇಟ್ ಬಟ್ಟೆ | 52,089 ಮೀ |
| 2. | ರೈಫಲ್ ಆಯಿಲ್ | 2,083 ಲೀ |
| 3. | ಗ್ರೀಸ್ | 1,302 ಕೆ.ಜಿ. |
| 4. | ಲಿನ್‌ಸೀಡ್ ಆಯಿಲ್ | 1,041 ಲೀ |
| 5. | ಫುಲ್ ಥ್ರೂ ಕಾರ್ಡ್ ಸಿಂಗಲ್ (ನೈಲಾನ್) | 5,000 ಸಂಖ್ಯೆ |
| 6. | ಫುಲ್ ಥ್ರೂ ಕಾರ್ಡ್ ಡಬಲ್ (ನೈಲಾನ್) | 1,000 ಸಂಖ್ಯೆ |
| 7. | ಎಮರಿ ಪೌಡರ್ | 100 ಕೆ.ಜಿ. |
| 8. | ಗಾಜ್ ವೈರ್ | 1,000 ಸಂಖ್ಯೆ |

ಸೂಚನೆ: ತಯಾರಿಕಾ ಘಟಕ/ ರೆಫ್ಯೂಟೆಡ್ ಏಜೆಂಟ್ ಮತ್ತು ರೆಪ್ಯೂಟೆಡ್ ಬ್ರಾಂಡ್ಸ್‌ಗಳಿಗೆ ಆದ್ಯತೆ ನೀಡಲಾಗುವುದು.

1. ಟೆಂಡರ್ ಅರ್ಜಿಗಳನ್ನು ದಿನಾಂಕ: 16.12.2003 ರಿಂದ 03.01.2004 ರವರೆಗೆ ಯಾವುದೇ ಕೆಲಸದ ದಿನದಂದು ಬೆಳಿಗ್ಗೆ 10.00 ಗಂಟೆಯಿಂದ ಸಾಯಂಕಾಲ 4.00 ಗಂಟೆಯೊಳಗೆ ಈ ಕಛೇರಿಯಲ್ಲಿ ಪಡೆಯಬಹುದು. ಪ್ರತಿ ಟೆಂಡರ್ ಅರ್ಜಿ ನಮೂನೆಯ ಬೆಲೆ ರೂ. 200/-ಗಳನ್ನು ನಗದು ಅಥವಾ ಡಿ.ಡಿ. ಮೂಲಕ ಮಾತ್ರ ಪಾವತಿಸಬಹುದಾಗಿದೆ. (ಮನಿಯಾರ್ಡರ್‌ನಲ್ಲಿ ಪಾವತಿಸಿದರೆ ತಿರಸ್ಕರಿಸಲಾಗುವುದು) ಟೆಂಡರ್ ಅರ್ಜಿಯನ್ನು ಅಂಚೆ ಮೂಲಕ ಪಡೆಯಲು ಇಚ್ಛಿಸುವವರು ರೂ. 200/-ಗಳಿಗೆ ಡಿ.ಡಿಯನ್ನು ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ಕಳುಹಿಸಲು ಕೋರಲಾಗಿದೆ. ಹಾಗೂ ಸ್ವವಿಳಾಸ ಹೊಂದಿದ ಲಕೋಟೆಯ ಮೇಲೆ ರೂ. 30/-ಗಳ ಅಂಚೆ ಚೀಟಿಯನ್ನು ಲಗತ್ತಿಸಿ ಕಳುಹಿಸಲು ಕೋರಿದೆ. ಭರ್ತಿ ಮಾಡಿದ ಟೆಂಡರ್ ಅರ್ಜಿ ನಮೂನೆಗಳನ್ನು ಹಾಗೂ ಶೇಕಡ 2ರಷ್ಟು ಇ.ಎಂ.ಡಿ.ಯನ್ನು ಪ್ರತಿ ಸಾಮಗ್ರಿ ಮೌಲ್ಯಕ್ಕೆ ಮುಂಗಡ ಠೇವಣಿಯನ್ನು ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರ ಹೆಸರಿನಲ್ಲಿ ಪಡೆದ ಡಿ.ಡಿ. ಹಾಗೂ ಮಾದರಿಗಳು ಹಾಗೂ ಇತರ ದಾಖಲೆಗಳಾದ ಆರ್ಥಿಕ ಸ್ಥಿತಿ, ಸಾಮರ್ಥ್ಯ, ಮಾರಾಟ ತೆರಿಗೆ ಮತ್ತು ಆದಾಯ ತೆರಿಗೆ ತೀರುವಳಿ ಪತ್ರ, ವಾರ್ಷಿಕ ವಹಿವಾಟು ಮತ್ತು ಅನುಭವ ಹಾಗೂ ಹಿಂದೆ ಸರಬರಾಜು ಮಾಡಿರುವ ವಿವರಗಳನ್ನು ಮೊಹರು ಮಾಡಿದ ಲಕೋಟೆಯಲ್ಲಿ ಈ ಕಛೇರಿಯ ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ (ಕೇಂದ್ರಸ್ಥಾನ-1)ರವರಾದ ಶ್ರೀ ಎಸ್. ರಾಮಕೃಷ್ಣ, ಐ.ಪಿ.ಎಸ್. ರವರಿಗೆ ಹೆಸರಿಸಿ ದಿನಾಂಕ: 16.01.2004 ಸಂಜೆ 5.00 ಗಂಟೆಯೊಳಗೆ ಸಲ್ಲಿಸತಕ್ಕದ್ದು. ಈ ದಿನಾಂಕದ ನಂತರದ ಟೆಂಡರ್‌ಗಳನ್ನು ಅಂಗೀಕರಿಸಲಾಗುವುದಿಲ್ಲ. ಮೊಹರು ಮಾಡಿದ ತುದಿಯಲ್ಲಿ "ಆಯುಧ ಸ್ವಚ್ಛತಾ ಸಾಮಗ್ರಿಗಳ" ಸರಬರಾಜಿಗಾಗಿ ಎಂದು ನಮೂದಿಸಿ, ಕೆಳಭಾಗದಲ್ಲಿ ಸಂಸ್ಥೆಯ ಹೆಸರು ಮತ್ತು ವಿಳಾಸವನ್ನು ನಮೂದಿಸತಕ್ಕದ್ದು.
2. ಆಯುಧ ಸ್ವಚ್ಛತಾ ಸಾಮಗ್ರಿಗಳ ಪ್ರತಿಯೊಂದು ಮಾದರಿಯನ್ನು 3 ಸಂಖ್ಯೆಯಲ್ಲಿ ಪ್ರತ್ಯೇಕವಾಗಿ ದಿನಾಂಕ: 16.01.2004ರ ಒಳಗೆ ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ (ಕೇಂದ್ರಸ್ಥಾನ-1), ಬೆಂಗಳೂರು ರವರಿಗೆ ಕಳುಹಿಸಬೇಕು.
3. ಸ್ವೀಕರಿಸಿದ ಟೆಂಡರ್‌ಗಳನ್ನು ದಿನಾಂಕ: 17.01.2004ರಂದು ಬೆಳಿಗ್ಗೆ 11.00 ಗಂಟೆಗೆ ಈ ಕಛೇರಿಯಲ್ಲಿ ತೆರೆಯಲಾಗುವುದು. ಇಚ್ಛೆಯುಳ್ಳ ಟೆಂಡರ್‌ದಾರರು ಟೆಂಡರ್‌ಗಳನ್ನು ತೆರೆಯುವ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಅವಕಾಶ ನೀಡಲಾಗುವುದು.
4. ಪ್ರತಿ ಸ್ವಚ್ಛತಾ ಸಾಮಗ್ರಿಗಳಿಗೆ ಪ್ರತ್ಯೇಕವಾಗಿ ಇ.ಎಂ.ಡಿ.ಯನ್ನು ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಪಾವತಿಸದಿದ್ದರೆ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು ಮತ್ತು ಟೆಂಡರ್‌ದಾರರು ಅಂಚೆ ಮೂಲಕ/ ಕೊರಿಯರ್ ಮೂಲಕ ಕಳುಹಿಸುವ ಟೆಂಡರ್ ಅರ್ಜಿ ಮತ್ತು ದಾಖಲಾತಿಗಳು ತಡವಾಗಿ ತಲುಪಿದಲ್ಲಿ/ ನಾಶವಾದಲ್ಲಿ ಇಲಾಖೆಯು ಜವಾಬ್ದಾರಿಯಲ್ಲ. ಇಲಾಖೆಯು ಯಾವುದೇ ಕಾರಣವನ್ನು ನೀಡದೆ ಸಾರಾಸಗಟಾಗಿ/ ಭಾಗಶಃ ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿದೆ. ಕಡಿಮೆ ಬೆಲೆ ಆಯ್ಕೆಯ ಮಾನದಂಡವಾಗಿರುವುದಿಲ್ಲ.

ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್
ಪಿ.ಆರ್.792 ಜನರಲ್ ಆಫ್ ಪೊಲೀಸ್ ರವರ ಪರವಾಗಿ.